

# ಸಿದ್ಧಗಂಗಾ



ಅಕ್ಟೋಬರ್ ೧೯೯೮




ಕುಂಬಳಗೋಡಿನಲ್ಲಿ ಸೆಪ್ಟೆಂಬರ್ ೫, ೧೯೯೮ರಂದು ಆದಿಚುಂಚನಗಿರಿಯ ಜಗದ್ಗುರು
ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಪಟ್ಟಾಭಿಷೇಕದ ಬೆಳ್ಳಿ ಹಬ್ಬದ ಸಮಾರಂಭದಲ್ಲಿ ಪರಮಪೂಜ್ಯ
ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆದ ಧರ್ಮಗೋಷ್ಠಿಯಲ್ಲಿ ತರಳಬಾಳು
ಬೃಹನ್ಮಠದ ಡಾ. ಶ್ರೀ ಶ್ರೀ ಶಿವಾಚಾರ್ಯ ಸ್ವಾಮಿಗಳು, ಆದಿಚುಂಚನಗಿರಿಯ ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥ
ಸ್ವಾಮಿಗಳು, ಶ್ರೀ ಶ್ರೀ ತಿರುಚ್ಚಿ ಸ್ವಾಮಿಗಳು, ಕೇಂದ್ರ ನಾಗರಿಕ ವಿಮಾನಯಾನ ಖಾತೆ ಸಚಿವ
ಶ್ರೀ ಅನಂತಕುಮಾರ್ ಮೊದಲಾದವರು ಭಾಗವಹಿಸಿದ್ದರು.

ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಸಲಹಾ ಸಮಿತಿ
ಡಾ. ಎಂ.ಎನ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಪ್ರಕಾಶಕರು
*ಹೆಚ್.ಬಿ. ಗಂಗಾಧರಯ್ಯ*
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭


**ಲೇಖಕರ ಅಭಿಪ್ರಾಯಗಳು ಶ್ರೀ ಮಠದ ಅಭಿಪ್ರಾಯಗಳಲ್ಲ**



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

**ಸಂಪುಟ : ೩೪ ಅಕ್ಟೋಬರ್ ೧೯೯೮ ಸಂಚಿಕೆ : ೧೦**

## ಒಳಪುಟಗಳಲ್ಲಿ ......




| **ವಿಳಾಸ :** | **ಚಂದಾ ವಿವರ :** |
|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ಜಿಲ್ಲೆ-೫೭೨ ೧೦೪ | ವಾರ್ಷಿಕ ಚಂದಾ ರೂ. ೫೦.<br>ಆಜೀವ ಸದಸ್ಯತ್ವ ರೂ. ೫೦೦.<br>ಬಿಡಿ ಪ್ರತಿ ರೂ. ೫.00 |


**ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.**

# ಎರಡು ಹಿರಿಯ ಚೇತನಗಳ ಪುಣ್ಯ ಸ್ಮರಣೆ.....

ಅಕ್ಟೋಬರ್ ಎರಡರಂದು ಗಾಂಧಿ ಜಯಂತಿ. ಜಯಂತಿಗಳೆಂದರೆ ಆದರ್ಶಜೀವನ ನಡೆಸಿದವರ ಪುಣ್ಯಸ್ಮರಣೆ. ಕೇವಲ ಸ್ಮರಣೆಯಾದರೆ ಅದು ಕಣ್ಮರೆಯಾದ ಹಿರಿಯ ಚೇತನಕ್ಕೆ ಅಣಕವಾಡಿದಂತೆ. ಆದರ್ಶಜೀವಿಗಳ ಮಾರ್ಗದಲ್ಲಿ ಹತ್ತು ಹೆಜ್ಜೆಯನ್ನಾದರೂ ಅನುಸರಿಸಿದಾಗ ನಿಜವಾದ ಭಕ್ತಿಗೌರವ ಸಮರ್ಪಣೆ ಮಾಡಿದಂತಾದೀತು. ಆದರೆ ಈಗ ನಡೆದಿರುವುದೇನು? ಗಾಂಧಿ ಜಯಂತಿಯಂದು ಗಾಂಧಿ ಸಮಾಧಿಯ ಮುಂದೆ ಕುಳಿತು 'ರಾಮಧುನ್' ಹೇಳುವ ನಾಟಕ. ಗಾಂಧಿ ಜಯಂತಿಯಂದೂ ಮಾಂಸವನ್ನೇ ಅಪೇಕ್ಷಿಸುವ ಕೊಳಕು ಮನಸ್ಸುಗಳು. ಅಹಿಂಸೆಯ ವೀರನಿಗೆ ಎತ್ತುವ ಮಂಗಳಾರತಿ, ನೀಡುವ ನೈವೇದ್ಯಗಳು ವ್ಯಂಗ್ಯಗಳಲ್ಲದೆ ಮತ್ತೇನು? ಗಾಂಧೀಜಿ ಜಗತ್ತು ಕಂಡ ಅದ್ಭುತ ವಿಸ್ಮಯವೆಂದು ಹೇಳಿದವರಿದ್ದಾರೆ. ''ಹಾಲನ್ನು ಕರೆಯುವಾಗ ಎಮ್ಮೆ ಮತ್ತು ಹಸುಗಳಿಗೆ ಹಿಂಸೆಮಾಡಿ ಕರೆಯುವುದು ನನಗೆ ಗೊತ್ತಾದಂದಿನಿಂದ; ನನಗೆ ಹಾಲಿನಲ್ಲಿ ಪೂರ್ಣ ಅರುಚಿಯುಂಟಾಗಿದೆ. ಜತೆಗೆ ಹಾಲು ಮನುಷ್ಯನ ಸ್ವಾಭಾವಿಕವಾದ ಆಹಾರವಲ್ಲವೆಂಬುದು ಎಂದಿನಿಂದಲೂ ನನ್ನ ಅಭಿಪ್ರಾಯ. ಆದುದರಿಂದ ನಾನು ಹಾಲಿನ ಉಪಯೋಗವನ್ನೇ ಬಿಟ್ಟಿದ್ದೇನೆ'' ಎಂದಿರುವ ಗಾಂಧೀಜೀಯವರ ಆತ್ಮಕಥೆಯ ಪುಟ ಅಹಿಂಸೆಯ ಬಗೆಗೆ ಅವರಿಗಿದ್ದ ಗಂಭೀರ ಭಾವನೆಯನ್ನು ವ್ಯಕ್ತಪಡಿಸುತ್ತದೆ. ಗಾಂಧಿಜಿಯವರ ಫೋಟೋವನ್ನು ಮೆರವಣಿಗೆ ಮಾಡಿದ ಮಾತ್ರಕ್ಕೆ; ಹಾರಹಾಕಿದ ಮಾತ್ರಕ್ಕೆ ಜಯಂತಿ ಸಾರ್ಥಕವಾಗುತ್ತದೆಯೇ? ಕವಿ ಶಿವರುದ್ರಪ್ಪನವರೆಂದಂತೆ ''ಅನಾವರಣವಾಯಿತಂತೆ ಗಾಂಧೀಜಿಯ ಚಿತ್ರಕ್ಕೆ, ಸತ್ತಗಾಂಧಿ ಅತ್ತನೇನೋ ನಡೆದ ಈ ವಿಚಿತ್ರಕ್ಕೆ'' ಎನ್ನಬೇಕಾದೀತು. ಕವಿ ಮುಂದುವರಿದು ಹೀಗೆನ್ನುತ್ತಾರೆ "ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ, ಅನಾವರಣವಾದಮೇಲೆ ಸಿದ್ಧವಾಗು ಶಿಕ್ಷೆಗೆ'' ಎಷ್ಟೊಂದು ಅರ್ಥಪೂರ್ಣ ಮಾತುಗಳು. ಭಾರತೀಯರೆಲ್ಲ ಇಂದು ತಮ್ಮ ಹೃದಯಗಳ ಅನಾವರಣ ಮಾಡಿಕೊಳ್ಳಬೇಕು. ಅದು ಬಿಟ್ಟು "ಆವರಣವೆ ಇಲ್ಲದವರಿಗೆ ಅನಾವರಣವೆಂತು?" ಗಾಂಧೀಜಿ "ಕುಲಸೀಮೆಗಳನ್ನು ಗೆದ್ದ ನಿಸ್ಸೀಮ ಚೆಲುವ". ಒಂದು ದೇಶಕ್ಕೆ, ಒಂದು ಧರ್ಮಕ್ಕೆ, ಒಂದು ಪಕ್ಷಕ್ಕೆ, ಒಂದು ಕಾಲಕ್ಕೆ ಸೀಮಿತವಾದವರಲ್ಲ, ಸರ್ವಕಾಲ ಸರ್ವದೇಶಕ್ಕೆ ಸೇರಿ ''ಸಬುಕೋ ಸನ್ಮತಿ ದೇ ಭಗವಾನ್'' ಎಂದ ಪರಿಪೂರ್ಣ ಭಾರತೀಯ.

ಲಾಲ್ ಬಹಾದ್ದೂರ್ ಶಾಸ್ತ್ರಿಯವರು ಜನಿಸಿದ್ದೂ ಅಕ್ಟೋಬರ್ ಎರಡರಂದೇ. ಭಾರತ ಕಂಡ ಪ್ರಾಮಾಣಿಕ ಪುರುಷ. ನಡೆ-ನುಡಿಗಳಲ್ಲಿ ಒಂದಾಗಿ ಬಾಳಿದ ಜನನಾಯಕ. ಭಾರತೀಯರಂತೂ ಶಾಸ್ತ್ರಿಜೀಯವರನ್ನು ಮರೆತೇ ಬಿಟ್ಟಿದ್ದಾರೆ. ಅಪ್ಪಟ ಚಿನ್ನದಂಥ ವ್ಯಕ್ತಿತ್ವ. ತಮ್ಮ ಮಗಳೊಮ್ಮೆ ಬರೆಯುವುದಕ್ಕೆ ಒಂದು ಸ್ಲೇಟು ಬೇಕೆಂದು ಕೇಳಿದಾಗ, ಸಂಬಳಬಂದ ನಂತರ ತಂದುಕೊಡುತ್ತೇನೆಂದ ಸರಳ ಜೀವನದ ದ್ರಷ್ಟಾರರು ಲಾಲ್ ಬಹಾದ್ದೂರರು. ಪ್ರಧಾನಿಯಾಗಿದ್ದಾಗಲೂ ತಮ್ಮ ಸರಳ ಜೀವನದ ರೀತಿ ನೀತಿಗಳನ್ನು ಬದಲಾಯಿಸಿಕೊಳ್ಳಲಿಲ್ಲ. ಉಡುಗೆ ತೊಡುಗೆಯಲ್ಲಿ ವೈಭವ ಕಾಣಲಿಲ್ಲ. ಎರಡು ಪಂಚೆ, ಎರಡು ಜುಬ್ಬಾಗಳಲ್ಲಿಯೇ ಬಾಳಿದರೆನ್ನುವುದು ಇಂದು ಸಚಿವರುಗಳಾಗಿರುವ ಎಷ್ಟು ಮಂದಿಗೆ ಗೊತ್ತಿದೆ. ಶಾಸ್ತ್ರೀಜಿಯವರ ಆಪ್ತವರ್ಗದ ಸೇವೆಯಲ್ಲಿದ್ದ ಪ್ರಮುಖರೊಬ್ಬರು ಈ ವಿಷಯ ತಿಳಿಸುತ್ತ ಕಣ್ಣೀರಿಟ್ಟುದನ್ನು ಪರಮಪೂಜ್ಯ ಶ್ರೀಗಳವರಿಂದ ತಿಳಿದಾಗ ಮನಸ್ಸು ಮರಗಟ್ಟಿದಂತಾಯಿತು. ಪೂಜ್ಯರೇ ಹೇಳುವ ಇನ್ನೊಂದು ಪ್ರಸಂಗ ಹೀಗಿದೆ - ಆಗಿನ್ನೂ ಲಾಲ್ ಬಹಾದ್ದೂರರು ಸಚಿವರಾಗಿರಲಿಲ್ಲ. ಸರ್ಕಾರದ ಸೇವೆಯಲ್ಲಿ ನೌಕರಿಮಾಡುತ್ತಿದ್ದರು. ತಿಂಗಳಿಗೆ ೫೦ ರೂ. ಸಂಬಳ. ಅವರ ಧರ್ಮಪತ್ನಿ ಶ್ರೀಮತಿ ಲಲಿತಾಶಾಸ್ತ್ರಿಯವವ ಕೈಯಲ್ಲಿ ಅಷ್ಟನ್ನೂ ಕೊಟ್ಟು ಬಿಡುತ್ತಿದ್ದರು. ತಾಯಿಯವರು ಸಂಸಾರ ನಿರ್ವಹಣೆ ಮಾಡುತ್ತಿದ್ದರು. ಒಮ್ಮೆ ಒಬ್ಬ ಅಪರಿಚಿತ ಶಾಸ್ತ್ರಿಯವರ ಬಳಿಗೆ ಬಂದು ೫೦ ರೂ. ಸಾಲಕೇಳಿದ. ಶಾಸ್ತ್ರಿಯವರು ತಮ್ಮ ಬಳಿ ಇಲ್ಲವೆಂದರು. ಅದನ್ನು ಕೇಳಿಸಿಕೊಂಡ ಶ್ರೀಮತಿ ಲಲಿತಾಶಾಸ್ತ್ರಿಯವರು ೫೦ ರೂ. ತಂದು ಕೊಟ್ಟು ಅಪರಿಚಿತ ವ್ಯಕ್ತಿಗೆ ಕೊಡಿಸಿದರು. ಅನಂತರ ಶಾಸ್ತ್ರಿಯವರು ತಮ್ಮ ಪತ್ನಿಯನ್ನು ಕೇಳಿದರು; ನಿನಗೆ ಎಲ್ಲಿ ಬಂತು ಈ ಹಣ ಎಂದು. ತಾಯಿ ಹೇಳಿದರು. ತಾವು ಕೊಟ್ಟ ತಿಂಗಳ ಸಂಬಳದಲ್ಲಿ ಉಳಿಸಿದ್ದು ಎಂದರು. ತಕ್ಷಣವೇ ಶಾಸ್ತ್ರಿಯವರು ತಮ್ಮ ಮೇಲಧಿಕಾರಿಗಳಿಗೆ ಬರೆದರು, ಮುಂದಿನ ತಿಂಗಳಿನಿಂದ ತಮಗೆ ೪೦ ರೂ. ಸಂಬಳ ಸಾಕೆಂದು. ಇದು ಲಾಲಾಬಹಾದ್ದೂರ್ ಶಾಸ್ತ್ರಿಜೀ - *What a great man"* ಆ ಪುಣ್ಯ ಪುರುಷನ ಸ್ಮರಣೆ ನಮಗೆ ನಂದಾದೀಪ!

-- **ಸಂಪಾದಕ**





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

''ಅವರವರ ಭಕುತಿಗೆ ಅವರವರ ಭಾವಕ್ಕೆ''
ಅವರವರಿಗೆಲ್ಲ ಗುರುವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಅರಿವಿನಾಗರವೆ ಅನುಭಾವದಾಳವೆ
ಅನುವಿನೊಳು ಘನವಿರಿಸಿದ ತೇಜವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಉಡುವೆ ಸೇವೆಗೆಂದು ತೊಡುವೆ ಸೇವೆಗೆಂದು
ನಡೆವೆ ಜಗದಗಲದಲಿ ಸೇವೆಗಾಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಉಳ್ಳುದೊಂದು ತನುವಸೇವೆಗಾಗಿ ಇಟ್ಟೆ
ಉಳ್ಳುದೊಂದು ಮನವ ಶಿವಕಿಟ್ಟೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮನವರಾರುಗೊಂಡಿರುವೆ ತನುಸೂರೆಗೊಂಡಿರುವೆ
ಕಲ್ಯಾಣದಣ್ಣನ ನುಡಿಗಳಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ನಿದ್ದೆ ಎಚ್ಚರಗಳಲಿ ನಿನ್ನದೊಂದೇ ಚಿಂತೆ
ಬಿದ್ದವರನೆತ್ತುವುದು ಇನ್ನೆಂತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಶೃಂಗಾರದ ಶ್ರೀ ಶಿವನೆ ಜಗಮುಡಿದಾಭರಣವೆ
ಋಷಿಯರಿಯದ ಶ್ರೀ ಭವ್ಯವೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

''ಕಣ್ಣು ಕಾಣುವತನಕ ಬೆನ್ನು ಬಾಗುವ ತನಕ''
ಪಣ್ಣು ಹಣ್ಣಾದರೂ ದುಡಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹಗಲೆನ್ನೆ ಇರುಳೆನ್ನೆ ಬೆಳಗೆನ್ನೆ ಬೈಗನ್ನೆ
ಜಗದ ಕಲ್ಯಾಣಕೆ ಮುಡಿದಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹಸಿವಗೆದ್ದು ನಿಂದೆ ತೃಷೆಯ ಒದ್ದು ನಿಂದೆ
ನಿದ್ದೆಯನು ಗೆದ್ದು ನಿಂದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

ಮಹಾತ್ಮ ಗಾಂಧಿಯರರು ಪಾನ ನಿರೋಧಿಗಳಾಗಿದ್ದರು. ಆದರೆ ದುರ್ದೈವವೆಂದರೆ ಗಾಂಧೀಜಿಯವರು ತಂದುಕೊಟ್ಟ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವ ಬಹುತೇಕ ಫಲಾನುಭವಿಗಳು ಪಾನವ್ಯಸನಿಗಳಾಗಿದ್ದಾರೆ. ಇದಕ್ಕಿಂತ ಘೋರ ದುರಂತ ಇನ್ನೊಂದಿಲ್ಲ. ಮಹಾತ್ಮಾಜಿಯವರು ಪವಿತ್ರ ಜೀವನವೇ ಸ್ವಾತಂತ್ರ್ಯದ ಅಡಿಗಲ್ಲು ಎದು ಭಾವಿಸಿದ್ದರು. ಆದರಿಂದು ರಾಜಕಾರಣದಲ್ಲಿರುವವರು ಪಾವಿತ್ರ್ಯತೆಯನ್ನು ಗಾಳಿಗೆ ತೂರಿದ್ದಾರೆ. ಗಾಂಧೀಜಿ ಅರೆಬೆತ್ತಲೆ ನಡೆದಾಡಿದ ಪರಿಪೂರ್ಣ ಪುಣ್ಯಪುರುಷರು. ಈಗಿನ ನಾಯಕರ ಐಷಾರಾಮದ ಭೋಗಬಾಳುವೆ ಭಾರತೀಯ ಸಂಸ್ಕೃತಿಗೆ ಅಪಚಾರವೆಸಗುತ್ತಿದೆ. ದೇಶವನ್ನು ಕಿತ್ತು ತಿನ್ನುತ್ತಿದ್ದಾರೆ. ವಿದೇಶಗಳಿಂದ ಸಾಲತಂದು ಋಣ ಭಾರವನ್ನು ಹೇರುತ್ತಿದ್ದಾರೆ. ಸರಳ ಜೀವನವಂತೂ ಸಾಧ್ಯವೇ ಇಲ್ಲ ಎಂಬಂತೆ ನಡೆದಿದ್ದಾರೆ. ರಾಷ್ಟ್ರ ನಿರ್ಮಾಣ ಯಜ್ಞದಲ್ಲಿ ಹುತಾತ್ಮರಾದ ಹಿರಿಯನಾಯಕರ ಸ್ಮರಣೆಯಲ್ಲಿ ಅವರು ನಡೆದ ದಾರಿಯಲ್ಲಿ ನಡೆಯುತ್ತಿಲ್ಲ. ಆತ್ಮಶುದ್ಧಿಯಿಲ್ಲದೆ ಎಲ್ಲಾ ಪ್ರಾಣಿಗಳೊಂದಿಗೂ ಒಂದಾಗುವುದು ಅಸಾಧ್ಯ. ಆತ್ಮಶುದ್ಧಿಯಿಲ್ಲದೆ ಅಹಿಂಸಾಧರ್ಮವನ್ನು ಅನುಸರಿಸುತ್ತೇನೆ ಎನ್ನುವುದು ಬರಿಯ ಕನಸು. ಹೃದಯಶುದ್ಧಿಯಿಲ್ಲದವರಿಗೆ ಎಂದಿಗೂ ಪರಮಾತ್ಮನ ಸಾಕ್ಷಾತ್ಕಾರವಾಗುವುದಿಲ್ಲ. ಆದುದರಿಂದ ಆತ್ಮಶುದ್ಧಿಯೆಂದರೆ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಶುದ್ಧಿ ಎಂದು ಅರ್ಥವಾಗಬೇಕು. ಶುದ್ಧಿಯ ಸ್ವಭಾವ ಎಲ್ಲೆಡೆಯೂ ಹರಡುವುದಾದುದರಿಂದ, ಒಬ್ಬನು ಆತ್ಮಶುದ್ಧಿಯುಳ್ಳವನಾದರೆ, ಅವನ ಸುತ್ತಲ ವಾತಾವರಣವೆಲ್ಲ ಶುದ್ಧವಾಗುವುದು ಎಂಬ ಮಹಾತ್ಮಗಾಂಧೀಜಿಯವರ ಆತ್ಮಕಥೆಯ ಮಾತುಗಳನ್ನಿಂದು ಘನ ಗಂಭೀರವಾಗಿ ಚಿಂತನ ಮಾಡಬೇಕಾಗಿದೆ.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಪರಮಾರ್ಥವನುಡಿದು ಪರರ ಕೈಯಾಂತು

ಬೇಡುವುದು ಕರ ಕಷ್ಟವಯ್ಯಾ,

ಪುರಾತನರಂತೆ ನುಡಿಯಲೇಕೆ? ಕಿರಾತರಂತೆ ನಡೆಯಲೇಕೆ?

ಆಸೆಯಿಚ್ಛೆಗೆ ಲೇಸ ನುಡಿವಿರಿ.

ಇಚ್ಛೆಯ ನುಡಿವುದು ಉಚ್ಚೆಯ ಕುಡಿಯುವದು ಸರಿಕಾಣಿರೋ!

ಇಚ್ಛೆಯ ನುಡಿವನೆ ಶಿವಶರಣನು?

ಮಾತಿನಲ್ಲಿ ಬೊಮ್ಮನ ನುಡಿದು

ಮನದಲ್ಲಿ ಆಶೆಯ ಸೊನೆಕರೆವುತಿಪ್ಪುದು

ಈ ವೇಷವ ಕಂಡೆನಗೆ ಹೇಸಿಕೆಯಾಯಿತ್ತು ಕಾಣಾ

ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ!

ತತ್ವಜ್ಞಾನದ ಮಾತನ್ನು ಕೇಳುವವರು ಪರರ ಮುಂದೆ ಕೈ ಚಾಚಿ ಬೇಡಿಕೊಳ್ಳುವುದು ತೀರಕಷ್ಟತರವಾಗಿರುವುದು. ಬಾಯಿಂದ ಬ್ರಹ್ಮಜ್ಞಾನವನ್ನು ಸುರಿಸುತ್ತ ಮನದಲ್ಲಿ ವಿಷಯವಾಸನೆಗಳ ಮಳೆಗರೆಯುವ ರೀತಿಯಲ್ಲಿದ್ದವರನ್ನು ನೋಡಿದರೆ ಹೇಸಿಗೆ ಬರುವುದು. ಜ್ಞಾನಿಗಳ ದೃಷ್ಟಿಯಲ್ಲಿ ದೊಡ್ಡವರಾದವರೇ ನಿಜವಾಗಿ ದೊಡ್ಡವರು. ಅಜ್ಞಾನಿಗಳಿಂದ ಹೊಗಳಿಸಿಕೊಳ್ಳುವ ವೇಷದಲ್ಲಿದ್ದವರಿಗೆ ಯಾವ ದೊಡ್ಡಸ್ತಿಕೆಯೂ ಇರುವುದಿಲ್ಲ.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಲೋಕರತಿ - ಧರ್ಮಸೆರೆ - ಶಿವಸಿದ್ಧಿ



ಧರ್ಮಧರ್ಮಗಳ ಕೋಶಕೋಶದೊಳು
ಜಗವ ಮೆದ್ದು ಕೊಬ್ಬಿಹ ಜೀವಾತ್ಮ
ನವ ನಿರ್ಮಿತಿ ಜಾಗರದೊಳು ಮಲಗುವ -
ನಿರವನು ಹೊಸದಾಗಿಸಲಧ್ಯಾತ್ಮ

ಹೊಕ್ಕ ಜೀವಕೂ ಹೊರಬಹ ಜೀವಕೂ
ಎಂಥ ವಿಕೃತಿ ಎಂಥಾಕಾರ!
ಮುಮುಕ್ಷು ಜೀವಕೆ ಜೀವನ್ಮುಕ್ತನ
ಗೀಳು ಹತ್ತುವುದೆ ಉದ್ಧಾರ.

ನೆಲದೊಳು ದೇಕುವ ಜೀವಿಗೆ ಖೇಚರ
ಗತಿಯನು ಕೊಡುವುದು ಧರ್ಮಸೆರೆ
ಸೆರೆಗಳೆವೂರ್ಜೆಯ ಗುರುಕೃಪೆಯೊದಗಿಪು-
ದರ್ಪಣಭಾವದಿ ತೆಪ್ಪಗಿರೆ.

ಜೀವಕಾಮ ತಣಿಯದೆ ಜೀವಾತ್ಮಕ್ಕೆ
ಬರಿಮಾತೆನಿಸುವುದಾತ್ಮರತಿ
ಗುರೂಪದೇಶದ ತಣ್‌ಪನಿಗಂಚೆಯ
ತುಪ್ಪುಳದಂತಿಹುದವನ ಮತಿ.

ಧರ್ಮಗಹ್ವರದಿ ತೊಡುವೊಡೆ ಚೇತನ
ಅಂತಃಕರಣಾರ್ಪಣ ದೀಕ್ಷೆ
ಇಹುದವಗಾ ಹಿಜಸಾಧಕ ಸ್ವಾಪದಿ
ಸಂಯಮಿ ಗುರುಕರುಣಾ ರಕ್ಷೆ.

ಲೋಕದ ರತಿ ಧರ್ಮದ ಸೆರೆ ಸದ್ಗುರು -
ವಚನೋದನ ಪಾಚನ ಬುದ್ಧಿ
ಒಂದೇ ಜನ್ಮದಿ ಪಡೆವ ಜೀವನೇ
ಧನ್ಯನಾತಗೆಯೆ ಶಿವಸಿದ್ಧಿ.

('ಸಿದ್ಧಗಂಗಾ ಶ್ರೀ' ಯಿಂದ)

**- ಡಾ. ಪು.ತಿ. ನರಸಿಂಹಾಚಾರ್**







# ಇಷ್ಟಲಿಂಗನಿಷ್ಠೆ ಗಟ್ಟಿಗೊಳ್ಳಬೇಕು*

- ಗೊ.ರು. ಚನ್ನಬಸಪ್ಪ
ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು

**ಹೃದಯದ ಬಾವಿಯ ತಡಿಯಲ್ಲಿ ಒಂದು ಬಾಳೆ ಹುಟ್ಟಿತ್ತು.
ಆ ಬಾಳೆಯಹಣ್ಣು ಮೆಲಬಂದ ಸರ್ಪನ ಪರಿಯ ನೋಡಾ.
ಬಾಳೆ ಬೀಗಿ ಸರ್ಪನೆದ್ದಡೆ ನಿರಾಳವು ಕಾಣಾ ಗುಹೇಶ್ವರಾ!**

ಇದು ಅನುಪಮ ಜ್ಞಾನಿ ಅಲ್ಲಮ ಪ್ರಭುವಿನ ಒಂದು ಅರ್ಥಪೂರ್ಣ ವಚನ. ನಮ್ಮ ಹೃದಯ ಭಾವ ತುಂಬಿದ ಒಂದು ಬಾವಿ. ಅದರ ದಡ ಸಹಜವಾಗಿ ತಂಪಾಗಿದೆ. ಅಲ್ಲಿ ಭಕ್ತಿ ಎಂಬ ಬಾಳೆ ಹುಟ್ಟಿದೆ. ಆ ಭಕ್ತಿಯ ಬಾಳೆ ನಿಷ್ಠೆಯೆಂಬ ಹಣ್ಣು ಬಿಟ್ಟಿದೆ. ಆ ಹಣ್ಣು ತಿನ್ನಲು ಚಾಂಚಲ್ಯವೆಂಬ ಸರ್ಪಬಂದಿದೆ. ಅದು ಹಣ್ಣಿಗೆ ಬಾಯಿ ಹಾಕಿದರೆ ಹಣ್ಣಿನಲ್ಲಿ ವಿಷಸೇರಿಬಿಡುತ್ತದೆ. ಇದು ಭಕ್ತಿಯ ಬಾಳೆಗೆ ಗೊತ್ತು. ಎಂತಲೇ ತಕ್ಷಣ ಎಚ್ಚರ ವಹಿಸಿ ಬೀಗಿ ನಿಲ್ಲುತ್ತದೆ. ಎಂದರೆ ದೃಢಗೊಳ್ಳುತ್ತದೆ. ಬಾಗಿದ ಬಾಳೆ ಬೀಗಿ ನಿಂತುದನ್ನು ಕಂಡು ಹೆದರಿದ ಹಾವು ಜಾಗಬಿಡುತ್ತದೆ. ಹಾವು ಹೋದ ಮೇಲೆ ಬಾಳೆಗೆ ಸಹಜ ನಿರಾಳ ನಿಶ್ಚಿಂತೆ ತಾನೆ? ಬಾಳೆ ಬೀಗುವುದೆಂದರೆ ಭಕ್ತಿಯ ನಿಷ್ಠೆ ಬಲಗೊಳ್ಳುವುದು. ಸರ್ಪನೆದ್ದಡೆ ಎಂದರೆ ಚಾಂಚಲ್ಯ ನೀಗುವುದು. ಭಕ್ತಿ ದುರ್ಬಲಗೊಂಡರೆ ನಮ್ಮ ನಿಷ್ಠೆಗೆ ಚಾಂಚಲ್ಯದ ವಿಷ ಸೇರಿ ಬದುಕು ಹಾಳಾಗಿ ಬಿಡುತ್ತದೆ. ಅದರ ಭಯ ತಪ್ಪಿದರೆ ಬಾಳು ನಿಶ್ಚಿಂತ. 'ಬಾಳೆ ಬೀಗಿ ಸರ್ಪನೆದ್ದಡೆ ನಿರಾಳವು ಕಾಣಾ ಗುಹೇಶ್ವರಾ' ಎಂಬ ಮಾತಿನ ಅರ್ಥವೇ ಇದು. ಈ ವಚನಕ್ಕೆ ದಾರ್ಶನಿಕ ವ್ಯಾಖ್ಯಾನ ಬೇರೆ ಇರಬಹುದು. ಮೂಲಾಹಂಕಾರದ ಈ ತನುವೆಂಬ ಕೂಪದ ದಂಡೆಯಲ್ಲಿ ಅಷ್ಟದಳ ಕಮಲ ಅರಳುತ್ತದೆ. ಆ ಕಮಲದ ಫಲಕ್ಕೆ ಅಧಃಕುಂಡಲನಿ ಆಕರ್ಷಿತವಾಗುತ್ತದೆ. ಆಗ ಆ ಕವಲು ಉಬ್ಬಿ ಅಧಃಕುಂಡಿನಿ ಜಾಗೃತಗೊಂಡರೆ ನಿಶ್ಚಿಂತ ಸ್ಥಿತಿ. ಎಂದರೆ ಅಂತಃಕರಣದ ಬಾವಿಯ ದಂಡೆಯಲ್ಲಿ ವಿವೇಕವೆಂಬ ಬಾಳೆ ಹುಟ್ಟಿದೆ. ಆ ಬಾಳೆಯ ಹಣ್ಣು ತಿನ್ನಲು ಚಂಚಲ ಮನಸ್ಸು ಹಾತೊರೆಯುತ್ತದೆ. ಆಗ ವಿವೇಕ ಜಾಗೃತವಾಗಿ ಚಂಚಲ ಮನಸ್ಸು ಮಾಯವಾದರೆ ನಿಶ್ಚಿಂತ ಸ್ಥಿತಿ. ಹೀಗೆ ಅರ್ಥ ಮಾಡಬಹುದು. ಆದರೆ ನಾನು ದಾರ್ಶನಿಕನಲ್ಲ; ಲೌಕಿಕ. ನನ್ನದು ಲೌಕಿಕ ವ್ಯಾಖ್ಯಾನ. ನನ್ನಂಥವರಿಗೆ ಇಷ್ಟು ತಿಳಿದರೂ ಸಾಕು.ಅನೇಕ ವೇಳೆ ತತ್ವಜ್ಞಾನಿಗಳು ಹೇಳುವುದು ನಮಗೆ ಅರ್ಥವಾಗುವುದಿಲ್ಲ. "**ಅರ್ಥವಾಗದ ಸಗ್ಗ ಎನಿತಿದ್ದರೇನು; ಅರ್ಥವಾದರೆ ಸಾಕು ನರಕವೂ ಜೇನು**" ಎಂಬ ಕುವೆಂಪು ಅವರ ಮಾತಿನಲ್ಲಿ ನನಗೆ ನಂಬಿಕೆ.

ಬಹುಶಃ ಇಳಕಲ್ಲಿನ ಚಿತ್ತರಗಿ ವಿಜಯ ಮಹಾಂತೇಶ್ವರ ಧರ್ಮಪೀಠದ ಶರಣ ಸಿದ್ಧಾಂತ ವಿದ್ಯಾ ಶಿಬಿರಗಳ ಮುಖ್ಯ ಆಶಯವೇ ಭಕ್ತರ ಭಕ್ತಿ ನಿಷ್ಠೆಗಳನ್ನು ದೃಢಗೊಳಿಸುವುದು, ಚಾಂಚಲ್ಯದ ಸರ್ಪವನ್ನು ಹೊಡೆದೋಡಿಸುವುದು; ಆ ಮೂಲಕ ಬದುಕನ್ನು ನಿರಾಳಗೊಳಿಸುವುದು ಎಂದು ನಾನು ಭಾವಿಸಿದ್ದೇನೆ. ಇಂತಹ ಒಂದು ಮಹತ್ವದ ಮಣಿಹ ಕೈಗೆತ್ತಿಕೊಂಡಿರುವ ಪೂಜ್ಯ ಇಳಕಲ್ಲು ಮಹಾಂತ ಶಿವಯೋಗಿಗಳಿಗೆ ನಾವೆಲ್ಲ ಎಷ್ಟು ಋಣಿಗಳಾಗಿದ್ದರೂ ಸಾಲದು.

ಕಳೆದ ಒಂದು ವಾರದಿಂದ ಇಲ್ಲಿ ಶಿವಾನುಭವ ತರಬೇತಿ ಶಿಬಿರ ನಡೆದಿದೆ. ಈ ಶಿಬಿರದ ಅವಧಿಯಲ್ಲಿ ಶಿಬಿರಾರ್ಥಿಗಳಿಗೆ ಬೆಳಗಿನಿಂದ ಬೈಗಿನವರೆಗೆ ಅನ್ಯಚಿಂತಗಳಿಲ್ಲ - ಪ್ರಭಾತ ಸಂಚಲನ, ವಚನಚಿಂತನ, ಇಷ್ಟಲಿಂಗ ಪೂಜಾನುಷ್ಠಾನ, ಶಿವಾನುಭವಜ್ಞಾನ, ಮಹಾಂತ ಜೋಳಿಗೆಯ ಪರ್ಯಟನ, ವಿಶೇಷ ಪ್ರವಚನ - ಇವು ನೀಡಿರುವ ಅನಿರ್ವಚನೀಯ ಆನಂದವನ್ನು ನೀವೆಲ್ಲ ಅನುಭವಿಸಿದ್ದೀರಿ. ನೀವು ಪುಣ್ಯವಂತರು.

ಈ ಶಿಬಿರ ನಡೆಸಲು ತುಮಕೂರಿನ ನೆಲ ಹದವಾಗಿತ್ತು. ಇಲ್ಲಿನ ಶರಣ ಬಳಗ ಮತ್ತು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಜಿಲ್ಲಾ ಹಾಗೂ ತಾಲ್ಲೂಕು ಘಟಕಗಳು ಕಳೆದ ಏಳೆಂಟು ತಿಂಗಳಿಂದ ಮನೆ ಮನೆಗೆ ಶರಣ ಸಂದೇಶ ಮುಟ್ಟಿಸುವ ಮಹಾಕಾರ್ಯ ನಡೆಸಿಕೊಂಡು ಬಂದಿವೆ. ಮನೆಮನೆಗಳಲ್ಲಿ ಮನ ಮನಗಳಲ್ಲಿ ಶರಣ ಕಿರಣಗಳ ಬೆಳಕನ್ನು ಬಿಂಬಿಸಿವೆ.ಇಲ್ಲಿನ ಶರಣ ಬಂಧುಗಳ ಸಹೃದಯದ ಬಾವಿಯ ದಂಡೆಯಲ್ಲಿ ಭಕ್ತಿಯ ಬಾಳೆ ಹುಟ್ಟಿದೆ; ಫಲ ಬಿಟ್ಟಿದೆ. ಅದು ಚಾಂಚಲ್ಯದ ಸರ್ಪನ ಬಾಯಿಗೆ ತುತ್ತಾಗದಂತೆ ನೋಡಿಕೊಳ್ಳಲು ಈ ಶಿವಾನುಭವ ಶಿಬಿರ ಮೂಡಿಬಂದಿದೆ. ನಿಮ್ಮ ಭಕ್ತಿ ಭಾವನೆಯನ್ನು ದೃಢಗೊಳಿಸಿ ನಿಷ್ಠಾಭಕ್ತಿಗೆ ಪರಿವರ್ತಿಸುವುದು ಈ ಶಿಬಿರದ ಆಶಯ. ಶಿಬಿರದಲ್ಲಿ ನೀವು ಪಡೆದ ಅನುಭವ ಅರ್ಥಾತ್ ಅನುಭಾವ ನಿಮ್ಮ ಮುಂದಿನ ಸಾಧನೆಯ ಹಾದಿಗೆ ಬೆಳಕು ತೋರಿದೆ ಎಂದು ನಾನು ತಿಳಿದಿದ್ದೇನೆ.

ಈ ಶಿವಾನುಭವ ಶಿಬಿರದಲ್ಲಿ ಶರಣ ಸಿದ್ಧಾಂತದ ಪ್ರಥಮದಿಂದ ಪರಮದವರೆಗೆ ಚಿಂತನೆ ನಡೆದಿದೆ. ದೇವರ ಅಸ್ತಿತ್ವ ಸೃಷ್ಟಿರಚನೆ, ಮಾನವ ಅಸ್ತಿತ್ವ - ಅರಿವು ಮರೆವು - ಈ ತಾತ್ವಿಕ

ವಿಚಾರಗಳೇ ಅಲ್ಲದೆ, ಕರಣ ಹಸಿಗೆ, ಅಷ್ಟಾವರಣ, ಪಂಚಾಚಾರ ಮತ್ತು ಷಟಸ್ಥಲಗಳಂತಹ ವೀರಶೈವ ಸೈದ್ಧಾಂತಿಕ ವಿಚಾರಗಳ ವಿವೇಚನೆಯೂ ನಡೆದಿದೆ. ಶರಣ ದರ್ಶನ ಕಾರ್ಯಕ್ರಮದಲ್ಲಿ ಮಾನವ ಕುಲ ಚಿಂತನ, ನೈತಿಕ ಚಿಂತನ, ಧಾರ್ಮಿಕ ಚಿಂತನ, ಶಿಕ್ಷಣ ಚಿಂತನ, ಆಧ್ಯಾತ್ಮಿಕ ಚಿಂತನ, ಸಮಾಜ ಚಿಂತನ ಮತ್ತು ಜಾನಪದ ಚಿಂತನ - ಹೀಗೆ ಸಪ್ತ ಚಿಂತನಗಳು ನಡೆದಿವೆ. ಆಸ್ತಿ, ಅಧಿಕಾರ, ಹಣ, ಕೀರ್ತಿ, ಭೋಗ, ಆಯಸ್ಸು, ಕೊನೆಗೆ ಮರಣ - ಈ ಸಪ್ತ ಚಿಂತೆಗಳಲ್ಲೇ ಇರುವ ಇಂದಿನ ಪರಿಸರದಲ್ಲಿ ನೀವು ಉದಾತ್ತ ಬದುಕಿನ ಸಪ್ತ ಚಿಂತನಗಳನ್ನು ನಡೆಸಿರುವುದು ನಿಜಕ್ಕೂ ಸಾರ್ಥಕವಾದುದು. ಅಭಿನಂದನಾರ್ಹವಾದುದು. ಈ ಶಿಬಿರದ ಪಠ್ಯ-ಪ್ರಾತ್ಯಕ್ಷಿಕಾ ಕ್ರಮಗಳ ಸಂಯೋಜನೆಯೇ ತುಂಬ ವೈಧಾನಿಕವಾಗಿದೆ. ಇದಕ್ಕಾಗಿ ಈ ಶಿಬಿರಕ್ರಮದ ಕರ್ತೃಗಳಿಗೆ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

ಈ ಶಿವಾನುಭವ ಶಿಬಿರದ ಒಂದು ಮಹತ್ವದ ಹಾಗೂ ವೈಶಿಷ್ಟ್ಯಪೂರ್ಣ ಕಾರ್ಯಕ್ರಮವೆಂದರೆ **'ಮಹಾಂತಜೋಳಗೆ'**ಯ ಪರ್ಯಟನ! ನನ್ನ ದೃಷ್ಟಿಯಲ್ಲಿ ಇದು ಶಿಬಿರದ ಮೇಲಿಟ್ಟ ಶಿಖರ. 'ಮಹಾಂತ ಜೋಳಿಗೆ'ಯ ಪರಿಕಲ್ಪನೆಯನ್ನು ನೆನೆದರೇ ಮೈ ರೋಮಾಂಚನಗೊಳ್ಳುತ್ತದೆ, ಮಾತು ಮೂಕವಾಗುತ್ತದೆ. ಸಾಮಾನ್ಯವಾಗಿ 'ಜೋಳಿಗೆ' ಎಂದರೆ ದುಡ್ಡು-ದುಗ್ಗಾಣಿ, ಅನ್ನ-ವಸ್ತ್ರ ಬೇಡಿ ತುಂಬಿಕೊಳ್ಳುವ ಒಂದು ಹೆಗಲ ಚೀಲ, ಭಿಕ್ಷುಕನ ಸ್ಥಿರಾಸ್ತಿ! ಆದರೆ ಮಹಾಂತ ಜೋಳಿಗೆಯ ಪರಿಯೇ ಬೇರೆ. ಅದು ಬೇಡುವುದು ದುಡ್ಡನ್ನಲ್ಲ; ದುಶ್ಚಟವನ್ನು. ದುಗ್ಗಾಣಿಯನ್ನಲ್ಲ, ದುರ್ಗುಣವನ್ನು. ಅಶನ-ವಸನಗಳನ್ನಲ್ಲ, ದುರ್ವ್ಯಸನ ದುರಾಚಾರಗಳನ್ನು. ಜಗತ್ತಿನ ಇತಿಹಾಸದಲ್ಲೇ ಕಂಡು ಕೇಳರಿಯದ ಜೋಳಿಗೆ-ಮಹಾಂತ ಜೋಳಿಗೆ. ಅದರಿಂದಲೇ ಬಾಳಿನ ಏಳಿಗೆ!

ಪರಮದಾಸೋಹಮೂರ್ತಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಪಾದಸ್ಪರ್ಶದಿಂದ ಪಾವನವಾಗಿರುವ ತುಮಕೂರು ನಗರದಲ್ಲಿ ಕಳೆದ ನಾಲ್ಕೈದು ದಿನಗಳಿಂದ ಮಹಾಂತ ಜೋಳಿಗೆಯ ಪರ್ಯಟನ ಕಾರ್ಯ ನಡೆದಿದೆ. ಸಚಿವರು, ಸಾಮಾಜಿಕರು, ಸ್ವಾಮಿಗಳು, ಸಂಘಟಕರು, ಮೊದಲಾಗಿ ಎಲ್ಲ ಕ್ಷೇತ್ರದವರೂ ಈ ಪರ್ಯಟನದಲ್ಲಿ ಪಾಲುಗೊಂಡಿದ್ದಾರೆ. ಈ ನಗರದ ಜನ ತುಂಬ ಉದಾರಿಗಳೆಂದು ಕೇಳಿದ್ದೇನೆ. ಬಹುಶಃ ಮಹಾಂತ ಜೋಳಿಗೆ ಸಾಕಷ್ಟು ತುಂಬಿರಬೇಕು. ಒಂದು ವೇಳೆ ತುಂಬಿರದಿದ್ದರೆ ನಿಮ್ಮಲ್ಲಿ ದುರ್ಗುಣ-ದುಶ್ಚಟಗಳಿಲ್ಲ ಎನ್ನಬೇಕಾಗುತ್ತದೆ. ಅವು ಇದ್ದರೆ ನೀವು ಅವನ್ನು ಬಿಟ್ಟುಕೊಡಲು ಸಿದ್ಧರಿಲ್ಲ ಎಂದರ್ಥವಾಗುತ್ತದೆ. ಏನೇ ಇರಲಿ ಮಹಾಂತ ಜೋಳಿಗೆ ಬರಿದಾಗಿಯಂತೂ ಬಂದಿಲ್ಲ ಎಂಬು ಭಾವಿಸುತ್ತೇನೆ.

ಪೂಜ್ಯ ಇಳಕಲ್ಲ ಮಹಾಂತ ಶಿವಯೋಗಿಗಳು ಶರಣ ಧರ್ಮದ ಹರಿಕಾರರಾಗಿ ನಾಡಿನ ಮೂಲೆಮೂಲೆಗಳಲ್ಲಿ ಹರಿದಾಡುತ್ತಿದ್ದಾರೆ. ಅವರು ಸಂಕಲ್ಪಸಿದ್ಧರು. ಶರಣ ಸಿದ್ಧಾಂತಕ್ಕೆ ಬದ್ಧರು. ಅವರ ಮಠ ಇರುವ ಇಳಕಲ್ಲಿನ ಮಹತ್ವ ಕುರಿತು ನಮ್ಮ ಜನಪದ ಸೊಲ್ಲೊಂದಿದೆ :

**ಆ ಕಲ್ಲು ಈ ಕಲ್ಲು, ಹಸಿರು ಹಳದಿಯ ಕಲ್ಲು**
**ಮುತ್ತೀನ ಕಲ್ಲು ಮುದಗಲ್ಲು - ಮುಂದಿರುವ**
**ರತ್ನದ ಕಲ್ಲು ಇಳಕಲ್ಲು!**

(ಈಗ ಇಳಕಲ್ಲಿನ ಕಲ್ಲು ನಿಜಕ್ಕೂ ರತ್ನವೇ ಆಗಿದೆ. ನಮಗೆಲ್ಲ ತಿಳಿದಿರುವಂತೆ ಅಲ್ಲಿನ ಭೂಗರ್ಭದಲ್ಲಿ ದೊರಕುತ್ತಿರುವ ಕಲ್ಲು ದೇಶ ವಿದೇಶಗಳಿಗೆ ರಫ್ತಾಗಿ ಕೊಟ್ಯಾಂತರ ರೂ.ಗಳ ವಿದೇಶಿ ವಿನಿಮಯಗಳಿಸುತ್ತದೆ.) ಈ ಜನಪದ ತ್ರಿಪದಿಯನ್ನು ಹಾಡಿದ ನಮ್ಮ ಹಳ್ಳಿಗರು ಭೂಗರ್ಭ ಶಾಸ್ತ್ರಜ್ಞರೇನೂ ಅಲ್ಲ. ಆದರೂ ಭೂಮಿಯ ಭಂಡಾರದ ಅರಿವು ಅವರಿಗಿದೆ. ಇಂತಹ ರತ್ನದ ಕಲ್ಲಿನ ಇಳಕಲ್ಲು ಮಹಾಂತ ಶಿವಯೋಗಿಗಳೇ ಇಂದು ನಮ್ಮ ಮುಂದಿರುವ ಒಂದು ಅನರ್ಘ್ಯ ರತ್ನ. ಅನುಭಾವದ ರತ್ನ. ಆ ರತ್ನದ ಹೊಳಪಿನ ಬೆಳಕಿನಲ್ಲಿ ನಾವೆಲ್ಲ ಶಿವಾನುಭವದ ಪ್ರಸಾದ ಸ್ವೀಕರಿಸುತ್ತಿದ್ದೇವೆ.

ಪೂಜ್ಯ ಮಹಾಂತ ಶಿವಯೋಗಿಗಳ ಭಕ್ತ ಬಳಗವು ಕರ್ನಾಟಕದಲ್ಲಷ್ಟೇ ಅಲ್ಲ ಭಾರತ ಅಷ್ಟೇ ಅಲ್ಲ, ವಿದೇಶಗಳಲ್ಲೂ ಹರಡಿಕೊಂಡಿದೆ. ಅವರಿಗೆ ನೂರು ಕಡೆಗಳಿಂದ ಬಿನ್ನಹಗಳಿರುತ್ತವೆ. ಯಾವ ಭಕ್ತರ ಕರೆಗೆ ಅವರು ಓಗೊಡಬೇಕು. ಬಿಡುವಿಲ್ಲದ ಸೇವಾಭಾರ. ಆದರೂ ಕರೆದಲ್ಲಿಗೆ ಹೋಗುತ್ತಾರೆ; ಕರೆಯದಲ್ಲಿಗೂ ಹೋಗುತ್ತಾರೆ. ಕರೆದಲ್ಲಿಗೆ ಬರಿಕೈಲಿ ಹೋಗುತ್ತಾರೆ; ಕರೆಯದಲ್ಲಿಗೆ ಜೋಳಿಗೆ ಹಿಡಿದು ಹೋಗುತ್ತಾರೆ. ನಮ್ಮ ಜನಪದ ಹೇಳುವ ಮಾತೊಂದಿದೆ :

**ಕಾಣಿಕೆ ಬಂದಾವು, ನೂರು ತೆಂಗಿನಕಾಯಿ**
**ಯಾರ್‍ಯಾರಿಗಂತ ಕಳಿಸಾಲಿ - ನನ್ನಮ್ಮ**
**ಬೇರು ಬಿಟ್ಟಂತೆ ಬಳಗಾವು!**

ಅಂತೆಯೇ ಪೂಜ್ಯ ಮಹಾಂತ ಶಿವಯೋಗಿಗಳ ಭಕ್ತ ಬಳಗ. ಆದರೂ ಅವರು ಮನೆಮನೆಗೂ ಹೋಗುತ್ತಾರೆ. ನಿಜವಾದ ಜಂಗಮ ಕ್ರಿಯೆ ಅವರದು. ಅವರಿಗೆ ಬಡವರ ಬಗೆಗೆ ಅತ್ಯಂತ ಕನಿಕರ. ಅವರು ಹೋಗುವುದು ಧನಬಡವರ ಮನೆಗಷ್ಟೇ ಅಲ್ಲ; ಮನಬಡವರ ಮನೆಗೂ ಹೋಗುತ್ತಾರೆ.

**ಎತ್ತಲಾರದ ಬಡಿಗಿ । ಬಗಲಾಗ ಜೋಳಿಗಿ**
**ಎತ್ತ ಹೊರಟೀರಿ ಹೊರಪಯಣ - ನನ್ನಯ್ಯ**
**ಬಡವಾದ ಮನಿಯಾಗ ನಿನ ಸೇವೆ!**





ನಮ್ಮ ಹಳ್ಳಿಯ ತಾಯಿ ಇಳಕಲ್ಲು ಶ್ರೀಗಳನ್ನು ಕಂಡೇ ಈ ಸೊಲ್ಲು ಅಂದಿರಬೇಕು. ಇಳಕಲ್ಲು ಪೂಜ್ಯರ ಸೇವೆ ಧನ ಬಡವರ ಮನೆಯಲ್ಲಿ; ಮನ ಬಡವರ ಮನೆಯಲ್ಲಿ. ನಿಜವಾದ ಜಂಗಮ ಸೇವೆಯೆಂದರೆ ಇದೇ. ಜಂಗಮ ಸೇವ್ಯನಾಗಬಾರದು, ಸೇವಕನಾಗಬೇಕು.

ಜಂಗಮನಿರಲಿ, ಗುರುವಿರಲಿ ಎಲ್ಲೋ ಒಂದು ಮಠ ಪೀಠದಲ್ಲಿ ಕುಳಿತು ಉಪದೇಶ ಮಾಡುವುದಲ್ಲ. ಭಕ್ತರ ಬಳಿಗೆ ಕಾರುಣ್ಯದ ಕಿರಣವಾಗಿ ಹರಿದು ಹೋಗಿ, ಲೋಕ ಬಂಧನದಲ್ಲಿ ಸಿಲುಕಿರುವ ಅವರನ್ನು ಕೈಹಿಡಿದು ನಡೆಸಬೇಕು. ಅಲ್ಲಮಪ್ರಭುವಿನ ಒಂದು ವಚನವಿದೆ :

**ಮುಂದಳೂರಿಗೆ ಬಟ್ಟೆ ಇದೇ ಹೋಗೆಂದಡೆ**
**ಅಂಧಕನೇನು ಬಲ್ಲನು ಹೇಳಾ?**
**ಸಂಗ್ರಾಮದಲ್ಲಿ ಓಡಿದ ಹಂದೆ ಗೆಲ್ಲ ಬಲ್ಲನೆ ಹೇಳಾ?**
**ನಿಂದ ನೀರಿನ ಮಡುವ ಕಂದನೀಸಬಲ್ಲನೆ ಹೇಳಾ?**
**ಗುಹೇಶ್ವರನೆಂಬ ನಿರಾಳದ ಘನವ**
**ಪಂಚೇಂದ್ರಿಯಕನೆತ್ತ ಬಲ್ಲನು ಹೇಳಾ?**

ಆದ್ದರಿಂದ ಗುರುವಾದವನು. ಜಂಗಮನಾದವನು, ಜನಸಾಮಾನ್ಯರ ಜೊತೆಯಲ್ಲಿದ್ದು ಅವರ ಕೈಹಿಡಿದು ನಡೆಸಿಕೊಂಡು ಹೋಗಬೇಕು. 'ಮುಂದಿನ ಊರಿಗೆ ಇದೇ ದಾರಿ, ಹೋಗು' ಎಂದರೆ ಅಂಧನಾದವನು ಹೇಗೆ ಹೋದಾನು? ಕಣ್ಣಿದ್ದವನು ಅವನ ಕೈಹಿಡಿದು ಕರೆದೊಯ್ಯಬೇಕು. ಯುದ್ಧದಲ್ಲಿ ಹೆದರಿ ಹಿಮ್ಮೆಟ್ಟುವವನು ಗೆಲ್ಲಲು ಸಾಧ್ಯವಿಲ್ಲ. ಅಂತೇ ಜೀವನ ಸಂಗ್ರಾಮದಲ್ಲಿ ಅಂಜುವವರ ಪಕ್ಕದಲ್ಲೇ ಇದ್ದು ಅವರಲ್ಲಿ ಆತ್ಮವಿಶ್ವಾಸ ತುಂಬಿ, ಬದುಕನ್ನು ಸಾರ್ಥಕ ಪಡಿಸಿಕೊಳ್ಳುವಂತೆ ಮಾಡಬೇಕು. ಮಗುವನ್ನು ನೀರಿನಲ್ಲಿ ಬಿಟ್ಟು ಈಜಾಡಲು ಹೇಳಿದರೆ ಅದು ಈಜಲು ಸಾಧ್ಯವೇ? ಈಜು ಬಲ್ಲವರು ಜೊತೆಯಲ್ಲೇ ಇದ್ದು ಈಜು ಕಲಿಸಬೇಕು. ಈ ಕಾರ್ಯ ಇಂತಹ ಸಂಚಾರಿ ಶಿವಾನುಭವ ಶಿಬಿರಗಳಿಂದ ಆಗುತ್ತದೆ ಎಂದು ನಾನು ತಿಳಿದಿದ್ದೇನೆ.

ಶರಣ ಧರ್ಮದ ತಿರುಳು, ಕರುಳು ಇಷ್ಟಲಿಂಗನಿಷ್ಠೆ. ಈ ನಿಷ್ಠೆ ಅಲುಗದಂತೆ ನೋಡಿಕೊಳ್ಳಬೇಕು. ಇಷ್ಟಲಿಂಗ ಪೂಜೆ ಎಂದರೆ ವಿಗ್ರಹಾರಾಧನೆಯಲ್ಲ; ಇಷ್ಟಲಿಂಗ ವಿಗ್ರಹವಲ್ಲ. ಅದು ಕರಸ್ಥಳದ ಚುಳುಕು. ಆತ್ಮದ ಬೆಳಕು. ಸ್ವಸ್ವರೂಪ ದರ್ಶನದ ದರ್ಪಣ!

ಜನಪದ ತಾಯಿ ತನ್ನ ಮಗುವಿಗೆ ಹೇಳುತ್ತಾಳೆ :

**ಹೂವು ಹೆರಳಿಗೆ ಚೆಂದ । ಮುತ್ತು ಕೊರಳಿಗೆ ಚೆಂದ**
**ಚುಕ್ಕಿಗಳು ಚೆಂದ ಮುಗಿಲೀಗೆ - ಕಂದಯ್ಯ**
**ಅಂಗೈಗೆ ಚೆಂದ ಲಿಂಗಯ್ಯ!**

ಇಷ್ಟಲಿಂಗ ಒಂದು ಆಭರಣ. ತೇಜಸ್ಸಿನ ಆಭರಣ. ಓಜಸ್ಸಿನ ಆಭರಣ. ಅನುಭಾವದ ಆಭರಣ, ಅಂತಃಚಕ್ಷುವನ್ನು ತೆರೆಯುವ ಆಭರಣ, ಅಂತರಂಗವನ್ನು ಅರಳಿಸುವ ಆಭರಣ. ಆತ್ಮನಿರೀಕ್ಷೆಯ ಆಭರಣ, ಸ್ವಸ್ವರೂಪ ದರ್ಶನದ ಆಭರಣ ಅದು ಸರ್ವಾಭರಣ!

ಬಂಡೀಪುರ ಅರಣ್ಯಧಾಮದಲ್ಲಿ ಒಂದು ವಸ್ತು ಸಂಗ್ರಹಾಲಯವಿದೆಯಂತೆ. ನಾನು ನೋಡಿಲ್ಲ, ಕೇಳಿದ್ದೇನೆ. ಅಲ್ಲಿ ಅರಣ್ಯ ಜೀವಿ ಪ್ರಾಣಿಗಳ ಛಾಯಾಚಿತ್ರ ಮತ್ತು ಮಾದರಿಗಳನ್ನೆಲ್ಲ ಕಲಾತ್ಮಕವಾಗಿ ಪ್ರದರ್ಶಿಸಿದ್ದಾರಂತೆ. ಅವನ್ನೆಲ್ಲ ನೋಡಿಕೊಂಡು ಪ್ರೇಕ್ಷಕರು ಹೊರಹೋಗುವ ಬಾಗಿಲಿನ ಬಳಿ ಒಂದು ದೊಡ್ಡ ಚೌಕಟ್ಟು ಇಟ್ಟು ಅದರ ಮೇಲೆ ಬಿಳಿ ತೆರೆ ಹಾಕಿದ್ದಾರಂತೆ. ಆ ತೆರೆಯ ಮೇಲೆ "ಈ ತೆರೆ ಸರಿಸಿ ನೋಡಿ. ಇಲ್ಲಿರುವಂತಹ ಕ್ರೂರಪ್ರಾಣಿ ಮತ್ತೆಲ್ಲಿಯೂ ಇಲ್ಲ" ಎಂದು ಬರೆದಿದೆಯಂತೆ. ಆ ಬರವಣಿಗೆ ನೋಡಿ ಕೆಲವರಿಗೆ ಹೆದರಿಕೆ, ಮತ್ತೆ ಕೆಲವರಿಗೆ ಸಹಜ ಕುತೂಹಲ. ಮೆಲ್ಲಗೆ ತೆರೆ ಸರಿಸಿದರೆ ಅಲ್ಲಿರುವುದೇನು? ಒಂದು ದೊಡ್ಡ ನಿಲುಗನ್ನಡಿ; ಅದರಲ್ಲಿ ಕಾಣಿಸುವುದೇನು? ನೋಡಿದ ಮನುಷ್ಯನೇ!

ಅರಣ್ಯದ ಪ್ರಾಣಿಗಳನ್ನು ಮೋಜಿಗೋ, ಆಹಾರಕ್ಕೋ, ಹಣಕ್ಕೋ ಕೊಲ್ಲುವ ಕ್ರೂರಪ್ರಾಣಿ ಮಾನವನೇ. ಈ ಸ್ವರೂಪದರ್ಶನದ ಸಾಧನದಿಂದ ಮನುಷ್ಯ ತನ್ನ ಸ್ವಭಾವವನ್ನು ತಿದ್ದಿಕೊಳ್ಳಲು ಪ್ರಯತ್ನಿಸಬೇಕು.

ಕೇರಳದಲ್ಲಿ ಆಗಿ ಹೋದ ವಿಚಾರವಾದಿ ನಾರಾಯಣ ಗುರು ಅವರಿಗೆ ಸಂಬಂಧಿಸಿದ ಪ್ರಸಂಗವೊಂದಿದೆ. ಮೂಢಭಕ್ತಿಯಿಂದ ದೂರದೂರದ ದೇವಾಲಯಗಳಿಗೆ ಹಿಂಡುಹಿಂಡಾಗಿ ನುಗ್ಗಿ, ಅಲ್ಲಿ ಪೂಜಾರಿಯ ಕೈಗೆ ಕಾಣಿಕೆ ಸಲ್ಲಿಸಿ, ಅವನು ಕೊಟ್ಟದ್ದನ್ನು 'ಪ್ರಸಾದ' ಎಂದು ಸ್ವೀಕರಿಸಿ ಬರುತ್ತಿದ್ದ ಜನರನ್ನು ಕಂಡು ನಾರಾಯಣ ಗುರು ಮರುಗಿದರು. ಅವರಲ್ಲಿ ವೈಚಾರಿಕ ಪ್ರಜ್ಞೆ ಮೂಡಿಸಬೇಕಾಗಿತ್ತು. ಜನರ ನರನಾಡಿಗಳಲ್ಲಿ ಬೆರೆತುಹೋಗಿದ್ದ ವಿಗ್ರಹ ಭಕ್ತಿಯನ್ನು ನಿಗ್ರಹಿಸುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಅದು ಒಮ್ಮೆಲೇ ಆಗುವಂತಹ ಕೆಲಸವಲ್ಲ. ಅಂತೆ ನಾರಾಯಣ ಗುರು ಒಂದು ಉಪಾಯಮಾಡುತ್ತಾರೆ. ಅವರೂ ಒಂದು ಸುಂದರ ದೇವಾಲಯ ನಿರ್ಮಿಸಿ ಅದರ ಗರ್ಭ ಗುಡಿಯಲ್ಲಿ ಒಂದು ಸುಂದರ ವಿಗ್ರಹವಿಡಿಸುತ್ತಾರೆ. ಜನರಿಗೆ ಯಾವ ಗುಡಿಯಾದರೇನು, ಯಾವ ದೇವರಾದರೇನು. ಕೈಮುಗಿದು ಕಾಣಿಕೆ ಸಲ್ಲಿಸಲಿಕ್ಕೆ ಒಂದಿದ್ದರೆ ಸಾಕು. ಈ ಹೊಸದೇವಾಲಯಕ್ಕೆ ಜನ ನುಗ್ಗತೊಡಗಿದರು. ಸ್ವಲ್ಪ ದಿನ ಕಳೆದ ಮೇಲೆ ಇದ್ದಕ್ಕಿದ್ದಂತೆ ಆ ವಿಗ್ರಹ ಮಾಯವಾಗಿತ್ತು. ಆ ಸ್ಥಳದಲ್ಲಿ ಒಂದು ದೀಪ ಉರಿಯುತ್ತಿತ್ತು. ಜನ ಸೋಜಿಗದಿಂದ ನಾರಾಯಣ ಗುರು ಅವರನ್ನು ಕೇಳಿದರು. ಅವರು "ಭಗವಂತನ ತೇಜಸ್ಸಿನ ಸಂಕೇತ ಈ ದೀಪ. ಈ ದೀಪಕ್ಕೆ ಕೈಮುಗಿದರೆ

ಭಗವಂತನಿಗೆ ಕೈಮುಗಿದಂತೆಯೇ. ನಿಮ್ಮ ಭಕ್ತಿಯನ್ನು ಈ ದೀಪಕ್ಕೆ ಸಲ್ಲಿಸಿ. ನಿಮಗೆ ಮುಕ್ತಿ ದೊರೆಯುತ್ತದೆ" ಎಂದರು. ಜನ ಅವರ ಮಾತಿನಂತೆ ದೀಪಕ್ಕೇ ಕೈಮುಗಿದು ಕಾಣಿಕೆ ಸಲ್ಲಿಸತೊಡಗಿದರು. ಮತ್ತಷ್ಟು ದಿನ ಕಳೆಯಿತು. ನಾರಾಯಣ ಗುರು ಒಂದು ದಿನ ಆ ದೀಪವನ್ನು ತೆಗೆಸಿ ಅಲ್ಲೊಂದು ಗ್ರಂಥವನ್ನಿಡಿಸಿದರು. ಭಕ್ತರಿಗೆ ಮತ್ತೆ ಸೋಜಿಗ. ಇದೇನೆಂದು ನಾರಾಯಣ ಗುರುಗಳನ್ನು ಕೇಳಿದರು. ಆಗ ಅವರು "ಈ ಗ್ರಂಥ ಪರಮಾತ್ಮನನ್ನೇ ಕುರಿತದ್ದು. ಅವನ ಸ್ವರೂಪ, ಅವನ ಲೀಲಾ ವಿನೋದ, ಅವನ ಅನುಗ್ರಹ - ಹೀಗೆ ಎಲ್ಲವನ್ನು ಈ ಗ್ರಂಥದಲ್ಲಿ ಸಚಿತ್ರವಾಗಿ ವಿವರಿಸಿದೆ. ಈ ಗ್ರಂಥದಲ್ಲೇ ನೀವು ಪರಮಾತ್ಮನನ್ನು ಕಾಣಬೇಕು. ಇದನ್ನು ನಂಬಿ" ಎಂದರು. ಅಷ್ಟರಲ್ಲಿ ನಾರಾಯಣ ಗುರು ಸಾಕಷ್ಟು ಜನಪ್ರಿಯರಾಗಿದ್ದರು. ಅವರ ಬಗೆಗೆ ಜನರಲ್ಲಿ ವಿಶ್ವಾಸ ಬೆಳೆದಿತ್ತು. ಗುರುಗಳು ಹೇಳಿದಂತೆಯೇ ಗ್ರಂಥ ದೇವರಿಗೆ ನಡೆದುಕೊಳ್ಳ ತೊಡಗಿದರು. ಹಾಗೆಯೇ ಇನ್ನಷ್ಟು ದಿನಗಳು ಕಳೆದವು. ಒಂದು ದಿನ ಆ ಗರ್ಭ ಗುಡಿಯಲ್ಲಿ ಆ ಗ್ರಂಥವೂ ಇರಲಿಲ್ಲ. ಅದರ ಸ್ಥಳದಲ್ಲಿ ನಾರಾಯಣ ಗುರು ಒಂದು ಕನ್ನಡಿ ಇರಿಸಿದ್ದರು. ಬಂದ ಭಕ್ತರಿಗೆ ಇನ್ನಿಲ್ಲದ ಸೋಜಿಗ. ನಾರಾಯಣ ಗುರುಗಳ ಬಳಿ ಹೋಗಿ ಕೇಳಿದರು. ಆಗ ಅವರು ಭಕ್ತರಿಗೆ ಒಂದು ಪ್ರಶ್ನೆ ಹಾಕಿದರು. "ಈಗ ಗುಡಿಯಲ್ಲಿ ನೀವು ಏನನ್ನು ಕಂಡಿರಿ?" "ಅಲ್ಲೇನಿದೆ? ಒಂದು ಕನ್ನಡಿಯಿದೆ ಅಷ್ಟೆ" ಎಂದರು ಭಕ್ತರು. "ಅದರಲ್ಲಿ ಏನು ಕಂಡಿರಿ?" ಎಂದು ನಾರಾಯಣ ಗುರು ಕೇಳಿದರು. "ಕನ್ನಡಿಯಲ್ಲಿ ಮತ್ತಿನ್ನೇನು ಕಾಣಲು ಸಾಧ್ಯ? ನಮ್ಮ ಮುಖಗಳನ್ನೇ ಕಂಡೆವು" ಎಂದು ಭಕ್ತರು ಹೇಳಿದರು. ಆಗ ನಾರಾಯಣ ಗುರು ಹೇಳಿದರು. "ಮೊದಲು ವಿಗ್ರಹದಲ್ಲಿ ದೇವರಿದ್ದಾನೆಂದು ಭಾವಿಸಿ ನೀವು ವಿಗ್ರಹಕ್ಕೆ ಕೈಮುಗಿದು ಪೂಜೆ ಸಲ್ಲಿಸುತ್ತಿದ್ದಿರಿ. ನಂತರ ಇಲ್ಲಿದ್ದ ದೀಪವೇ ಭಗವಂತನ ಚೇತನವೆಂದು ತಿಳಿದು ಆರಾಧಿಸಿದಿರಿ. ಆ ನಂತರ ಇಲ್ಲಿಟ್ಟಿದ್ದ ಗ್ರಂಥದಲ್ಲೇ ದೇವರಿದ್ದಾನೆದು ನಂಬಿದಿರಿ. ಈಗ ಕನ್ನಡಿಯಲ್ಲಿ ನಿಮ್ಮನ್ನೇ ಕಾಣುತ್ತಿದ್ದೀರಿ. ಅಂದರೆ ನಿಮ್ಮಲ್ಲೇ ದೇವರಿದ್ದಾನೆ. ಅರ್ಥಾತ್ ನೀವೇ ದೇವರು. ಇದನ್ನು ನಂಬಿ" ಎಂದರು. ನಾರಾಯಣ ಗುರುಗಳ ಮಾತು ಭಕ್ತರಿಗೆ ಅರಿವಾಯಿತು. "ದೇವರನ್ನು ಹೊರಗೆ ಹುಡುಕುವುದಲ್ಲ. ನಮ್ಮಲ್ಲೇ ಇದ್ದಾನೆ. ಅದನ್ನು ಅನುಭವಕ್ಕೆ ತಂದು ಕೊಂಡು ನಾವೇ ದೇವರಾಗಬೇಕು" ಎಂಬುದನ್ನು ಅರ್ಥ ಮಾಡಿಕೊಂಡ ಜನಕ್ಕೆ ವಿಗ್ರಹರಾಧನೆ ಅರ್ಥಹೀನ ಎಂಬ ಅರಿವುಂಟಾಯಿತು. ಶರಣ ಧರ್ಮದ ಇಷ್ಟಲಿಂಗ ಪೂಜೆಯ ಮರ್ಮವೇ ಇದು. ಸ್ವಸ್ವರೂಪದರ್ಶನ. ಲಿಂಗ ಪೂಜೆ ಮಾಡುತ್ತ ಮಾಡುತ್ತಾ ತಾನೇ ಲಿಂಗವಾಗುವುದು!

ಇಷ್ಟಲಿಂಗದ ನಿಷ್ಠೆ ಬಲಗೊಂಡರೆ ಬದುಕಿನ ಸವಾಲುಗಳನ್ನು ಎದುರಿಸುವ ಆತ್ಮಸ್ಥೈರ್ಯ ಉಂಟಾಗುತ್ತದೆ. ಇಷ್ಟಲಿಂಗ ಧರಿಸಿದ ಭಕ್ತ ಕೆಚ್ಚಿನ ಕಲಿಯಾಗುತ್ತಾನೆ. ಜನಪದ ಮಂತ್ರ ಇದಕ್ಕೆ ಸಾಕ್ಷಿ :

**ಹಚ್ಚ ಹಣೆಯ ಮ್ಯಾಲ । ಬಟ್ಟೀನ ವಿಭೂತಿ**
**ಇಚ್ಚೆಯ ಲಿಂಗ ಎದಿಮ್ಯಾಲ - ಇದ್ದ**
**ಕಿಚ್ಚೀನ ಬೆಂಕಿ ತುಳಿದೇವ**

ಎಂತಹ ವಿಶ್ವಾಸದ ಮಾತು! ಇಲ್ಲಿನ ಇಚ್ಚೆಯ ಲಿಂಗವೆಂದರೆ ಇಷ್ಟಲಿಂಗವೇ. ಆ ಇಷ್ಟಲಿಂಗದ ಪೂಜೆ ಇರಲಿ, ಅದು ಎದೆಯ ಮೇಲಿದ್ದರೂ ಸಾಕು ನಮಗೆ ರಕ್ಷೆಯಾಗುತ್ತದೆ. ಆ ರಕ್ಷೆಯೊಂದಿದ್ದರೆ ಕಷ್ಟ ಕಾರ್ಪಣ್ಯಗಳ ಬೆಂಕಿಯ ಮೇಲಾದರೂ ನಡೆದೇನು ಎಂಬ ಕೆಚ್ಚು! ನಮ್ಮ ಜನಪದರ ಅನುಭಾವ ನಮ್ಮನ್ನು ಮೂಕ ವಿಸ್ಮಯರನ್ನಾಗಿ ಮಾಡುತ್ತದೆ ಲಿಂಗ ಪೂಜೆಯ ಬಗ್ಗೆ ತಮ್ಮ ಜನಪದರಿಗಿರುವಷ್ಟು ಶ್ರದ್ಧೆ ಅದರ ಬಗ್ಗೆ ಓದಿಕೊಂಡವರಿಗೂ ಇಲ್ಲ.

**ತೆಂಗೀನ ತೋಟಕ್ಕೆ । ತಿಂಗಳಿಂದ ಮಳೆಯಿಲ್ಲ**
**ಸಂಗಯ್ನ ಶರಣರ ಲಿಂಗಯ್ಯ - ಮಿಂದ ನೀರು**
**ತೆಂಗೀನ ತೋಟಕ್ಕೆ ಹರಿದಾವು!**

ಎಂತಹ ಭಾವಪೂರ್ಣ ನುಡಿಗಟ್ಟು. ಲಿಂಗದ ಮೇಲೆ ಎರೆದ ನೀರು ಭಕ್ತಿಯ ಮಳೆಯಾಗಿದೆ. ಬದುಕಿನ ತೋಟಕ್ಕೆ ನೀರಾಗಿದೆ. ನೀರು ಹರಿದ ತೋಟದ ಬಾಳೆ ಅರ್ಥಾತ್ ಬಾಳು ಹಸಿರಾಗದೆ? ನಮ್ಮ ಜನಪದರಿಗೆ ಇಷ್ಟಲಿಂಗ ಒಂದು ಅಭಯದ ರಕ್ಷೆ!

**ಲಿಂಗಯ್ಯ ಇರುವಾಗ । ಹಂಗಿನಂಜಿಕಿ ಬ್ಯಾಡ**
**ಭಂಗಪಟ್ಟುಂಬ ಭಯ ಬ್ಯಾಡ - ಗೆಳತ್ಯಮ್ಮ**
**ಸಂಗಯ್ನ ಶರಣರಿರುವಾಗ!**

ಲಿಂಗನಿಷ್ಠೆ ಇದ್ದವರಿಗೆ ಹಂಗು ಹೆದರಿಕೆಗಳಿರುವುದಿಲ್ಲ. ಅವರು ಭಂಗಪಟ್ಟು ಉಣ್ಣುವುದೂ ಇಲ್ಲ. ತಾವೇ ಸ್ವತಃ ಕಾಯಕಮಾಡಿ ಬೆವರು ಹರಿಸಿ ದುಡಿದು ಬಂದುದು ಪ್ರಸಾದ ಎಂದು ಸ್ವೀಕರಿಸುತ್ತಾರೆ. ಜೊತೆಗೆ ದಾಸೋಹವನ್ನೂ ಮಾಡುತ್ತಾರೆ. ಅವರು ಮಾಡುವ ಪೂಜೆ ಸಂಗಯ್ಯನ ಶರಣರಿಗೆ ಸಲ್ಲುವ ಪೂಜೆ ಎಂದರೆ ತಮ್ಮ ಪೂಜೆಯ ಫಲ ಸುತ್ತಮುತ್ತಣ ಸಮಾಜದ ಸೇವೆಗೆ ಮೀಸಲು.

ಬಂಧುಗಳೇ, ಇಂದು ಜಾನಪದ ಚಿಂತನ ಕಾರ್ಯಕ್ರಮವಾದ ಕಾರಣ ಜನಪದರ ವಿಚಾರಗಳನ್ನು ಜನಪದ ಮಂತ್ರಗಳ ಮೂಲಕವೇ ನಿಮಗೆ ಹಂಚುತ್ತಿದ್ದೇನೆ. ನಾನು ವೇದಾಗಮ ಶ್ಲೋಕಗಳನ್ನು ಓದಿಲ್ಲ. ನಾನು ಬೆಳೆದದ್ದು, ಓದಿದ್ದು ಹಳ್ಳಿಯ ಅಂಗಳದಲ್ಲಿ. ನನಗೆ ನಮ್ಮ ಹಳ್ಳಿಗರ ಸೊಲ್ಲು ವೇದಕ್ಕಿಂತ ಹಿರಿಯದು. ಏಕೆಂದರೆ ಅದು ಬುದ್ಧಿಯ ಫಲ ಸೃಷ್ಟಿಯಲ್ಲ, ಬದುಕಿನ





ಅನುಭವ ಫಲಸೃಷ್ಟಿ. ನಮ್ಮ ಹಳ್ಳಿಗರಿಗೆ ತಮ್ಮ ಬದುಕೇ ಶಾಲೆ; ಅನುಭವವೇ ಗುರು. ಅವರು ಸೊಲ್ಲು ಸೊಲ್ಲಿಗೆ ಶರಣರನ್ನು ನೆನೆಯುವವರು. ಹಸಿದ ಹಸುವಿಗೆ ಹುಲ್ಲು ಹಾಕುವರು, ಶಿಶುವಿಗೆ ಹಾಲು ಕೊಡುವವರು, ಬಿಸಿಲಲ್ಲಿ ನಿಂತವರನ್ನು ನೆರಳಿಗೆ ಕರೆದವರು. ಇಂತಹ ಪರಮ ಸಾತ್ವಿಕ ಬದುಕನ್ನು ಬದುಕುವ ಜನಪದರನ್ನು ಅವರು ನಂಬಿದ ದೇವರು ಕೈಬಿಡಲು ಸಾಧ್ಯವೇ? ಅವರಿಗೆ ಚಿಂತೆ ಬಂದರೆ ದೇವರೇ ರಕ್ಷಣೆಗೆ ಬರುತ್ತಾನೆ :

**ಚಿಂತೆ ಮಾಡ್ಕೊತ್ತಿಗೆ । ಅಂತುರಲಿ ಶಿವಬಂದ**
**ಚಿಂತ್ಯಾಕೆ ನಿನಗೆ ಹಸುಮಗಳೆ - ಲಿಂಗಯ್ಯ**
**ಚಿಂತಿಲ್ದ ಅನ್ನ ಕೊಡುತಾನೆ!**

ಹಳ್ಳಿಯ ಗರತಿಯ ಈ ಸೊಲ್ಲಿನ ಸೊಗಸು ನೋಡಿ, ಆಕೆ ತನ್ನ ಮಗಳಿಗೆ ಕೊಡುವ ಧೈರ್ಯ ಎಂತಹುದು, ಅಂಗೈಯ್ಯ ಲಿಂಗಯ್ಯ "ಚಿಂತಿಲ್ಲದ ಅನ್ನ ಕೊಟ್ಟು ಸಂತೋಷದಿಂದ ಸಲಹುತ್ತಾನಂತೆ" ಲಿಂಗಯ್ಯ ಕೊಡುವ ಅನ್ನ ಮತ್ತೆ ಮತ್ತೆ ಹಸಿಯುವ ಅನ್ನವಲ್ಲ ಹಸಿಯದ ಅನ್ನ. ಹಸಿದರೆ ತಾನೆ ಚಿಂತೆ? ಅಂತೇ ಈ ಶಿವಾನುಭವ ಶಿಬಿರಗಳಲ್ಲಿ ಅನುಭಾವಿಗಳು ಅನುಭಾವದ ಅಡಿಗೆ ಮಾಡಿ ಬಡಿಸುತ್ತಾರೆ. ಇಲ್ಲಿ ನೀವು ಉಂಡ ಅನ್ನ ಅಂಗಗುಣಗಳನ್ನು ಬೆಳೆಸುವ ಅನ್ನವಲ್ಲ, ಲಿಂಗಗುಣಗಳನ್ನು ಅರಳಿಸುವ ಅನ್ನ । ಅರಿವಿನ ಪ್ರಸಾದ; ಆನಂದದ ಪ್ರಸಾದ!

ಇಷ್ಟು ದಿನಗಳಲ್ಲಿ ನಿಮ್ಮ ನಿಷ್ಠೆ ಬೆಳೆದಿರಬೇಕು. ಕಷ್ಟ ಬಂದರೂ ಎದುರಿಸುವ ಕೆಚ್ಚು ತುಂಬಿರಬೇಕು. ಅಂತಹ ಕೆಚ್ಚು ತುಂಬಿದ ಹಳ್ಳಿಯ ಗರತಿಯ ಒಂದು ನುಡಿಮುತ್ತ ಕೇಳಿ :

**ಮಳೆಯು ಬಂದರೆ ಬರಲಿ । ಮರದ ಮ್ಯಾಲಿರುವೆ**
**ಮಳೆ ನಿಂತ್ರು ಮರದ ಹನಿ ಬಿಡದು - ಹಡದವ್ವ**
**ನೀ ಬಿಟ್ರು ನನ್ನ ಮನ ಬಿಡದು!**

ತಾಯಿ ತನ್ನನ್ನು ದೂರಮಾಡಿದರೂ ಹೆಣ್ಣಿನ ಮನ ತನ್ನ ತೌರನ್ನು ಬಿಡದು. ಭಕ್ತನಾದವನೂ ಅಷ್ಟೇ. ಲಿಂಗ ತನ್ನನ್ನು ಬಿಟ್ಟರೂ (ಎಂದರೆ ಕಷ್ಟ ಬಂದಾಗ 'ದೇವರು ನನ್ನನ್ನು ಕೈಬಿಟ್ಟ' ಎಂದು ಹೇಳುವುದನ್ನು ನಾವು ಕೇಳಿದ್ದೇವೆ) ತಾನು ಲಿಂಗದಲ್ಲಿ ಮನ ಇಟ್ಟಿರಬೇಕು. ಮಳೆ ಬಂದರೂ ಅಳುಕದೆ ಮರದ ಮೇಲೆ ಕುಳಿತು ಕೊಳ್ಳುವ ಧೈರ್ಯ. ಹಾಗೆಯೇ ನಿಷ್ಠಾಭಕ್ತನಾದವನು ಕಷ್ಟಗಳ ಮಳೆಗರೆದರೂ ಧೈರ್ಯದ ವೃಕ್ಷಪತ್ತಿ ಕುಳಿತುಕೊಳ್ಳುತ್ತಾನೆ. ಇದು ಸಾಮಾನ್ಯ ಮಾತಲ್ಲ. ಆತ್ಮ ವಿಶ್ವಾಸದ ಅಮೃತವೇ ತುಂಬಿದ ಈ ತ್ರಿಪದಿಯಲ್ಲಿ!

ನಮ್ಮ ಜನಪದರು ವಚನಕಾರರಂತೆ ಇಹದ ಸುಖ ದುಃಖಗಳ ಬಗೆಗೇ ಚಿಂತನೆ ನಡೆಸಿದವರು. ಇಹದ ಬದುಕಿನಲ್ಲೇ ನೆಮ್ಮದಿಯ ಸ್ಥಲವನ್ನು ಕಂಡವರು. ಅವರಿಗೆ ಸತ್ತಮೇಲೆ ಸಿಗುವ ಸ್ವರ್ಗದಲ್ಲಿ ನಂಬಿಕೆಯಿಲ್ಲ. ಅವರು ಸಾಯುವ ಮುನ್ನವೇ ಸಾವು ಅನುಭವಿಸುತ್ತಾರೆ. ಮೇಲಾಗಿ ಅವರಿಗೆ ಸಾವು ಸಾವೇ ಅಲ್ಲ. ಅದು ಮಹಾನವಮಿ!

**ಕೈಲಾಸ ಕೈಲಾಸ । ಕಾಣದ ಕೈಲಾಸ**
**ತಿಳಿಯದವರಿಗೆ ಮೋಸ - ಈ ಕಾಯ**
**ಶಿವನೀಗೆ ಹಿರಿಯ ಮಂದಾಸ!**

ಕೈಲಾಸವೆನ್ನುವುದು, ತಿಳಿದವರೆನ್ನುವವರು ತಿಳಿಯದವರನ್ನು ದಿಕ್ಕುಗೆಡಿಸುವ ಒಂದು ಮೋಸ ಎನ್ನುತ್ತಾರೆ. ಈ ಕಾಯವನ್ನು ಶಿವನ 'ಸುಪ್ಪತ್ತಿಗೆ' ಎಂದು ಕರೆದು ಕಾಯ ಪಾವಿತ್ರ್ಯದ ಹಿರಿಮೆಯನ್ನು ಹೇಳುತ್ತಾರೆ. ಇದರಲ್ಲಿ ತಿಳಿದವರು ಯಾರು, ತಿಳಿಯದವರು ಯಾರು ಎನ್ನುವುದನ್ನು ನಾವು ವಿಚಾರ ಮಾಡಬೇಕು. ಒಂದು ಸ್ವಾರಸ್ಯದ ಪ್ರಸಂಗ :

ಒಬ್ಬ ಆರೋಗ್ಯ ಸಚಿವ ಹುಚ್ಚಾಸ್ಪತ್ರೆಗೆ ಪರಿಶೀಲನೆಗೆಂದು ಭೇಟಿ ನೀಡಿದ. ಆಸ್ಪತ್ರೆಯ ಒಳರೋಗಿ ವಿಭಾಗಕ್ಕೆ ಹೋದಾಗ ಅಲ್ಲೊಬ್ಬ ರೋಗಿ ಹಾಸಿಗೆಯ ಮೇಲೆ ಕುಳಿತು ಒಂದು ಚಿಪ್ಪಿಗೆ ತನ್ನ ಮೂತ್ರ ವಿಸರ್ಜನೆ ಮಾಡಿ, ಕೈಯಲ್ಲಿ ದಾರ ಕಟ್ಟಿದ ಒಂದು ಕಡ್ಡಿ ಹಿಡಿದು ಮೀನು ಹಿಡಿಯುವವನಂತೆ ಕಡ್ಡಿ ಆಡಿಸುತ್ತಿದ್ದ. ಅದನ್ನು ಗಮನಿಸಿದ ಸಚಿವ ರೋಗಿಯ ಕ್ಷೇಮಸಮಾಚಾರ ವಿಚಾರಿಸಲೆಂದು "ಏನಪ್ಪ ಎಷ್ಟು ಮೀನು ಸಿಕ್ಕಿದವು?" ಎಂದು ಕೇಳಿ ತನ್ನ ಬುದ್ಧಿವಂತಿಕೆ ಪ್ರದರ್ಶಿಸಿದ. ಆಗ ಆ ರೋಗಿ, "ಏನ್ರಿ, ನಿಮ್ಮ ತಲೆ ಸರಿಯಿದೆಯೆ? ಮೂತ್ರದಲ್ಲಿ ಮೀನು ಸಿಕ್ಕುತ್ತವೇನು?" ಎಂದು ಕೇಳಿ ಬಿಟ್ಟ. ಸಚಿವ ತನ್ನ ಬುದ್ಧಿವಂತಿಕೆಯ ಮೇಲೆ ಆ ರೋಗಿ ಎರಚಿದ ಬೂದಿಯನ್ನು ಒರೆಸಿಕೊಂಡು ಜಾಗ ಖಾಲಿ ಮಾಡಿದ. ಈಗ ಹೇಳಿ ಇವರಿಬ್ಬರಲ್ಲಿ ಯಾರು ಹುಚ್ಚರು?

ಇಂತಹ 'ಸುಧಾರಿತ ಹುಚ್ಚರ' ಸಮೂಹದಲ್ಲಿರುವ ನಮಗೆ ಸಮಾಧಾನ ಬೇಕೆಂದರೆ ನಮ್ಮ ಜನಪದರ ಮತ್ತು ವಚನಕಾರರ ಬದುಕಿನ ಅಂಗಳಕ್ಕೇ ಬರಬೇಕು. ಬದುಕನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಹಾಗೆ ಅರ್ಥಮಾಡಿಕೊಂಡು ನಡೆದರೆ ಸುಖದುಃಖಗಳನ್ನು ಸಮಾನವಾಗಿ ಪರಿಗಣಿಸುವ ಪ್ರಜ್ಞೆ ಅರಳುತ್ತದೆ. ಅರಿವಿನ ಮಾರಿತಂದೆಯ ಒಂದು ವಚನ ನಮಗೆ ಈ ದಿಸೆಯಲ್ಲಿ ದಾರಿ ತೋರುತ್ತದೆ :

**"ಕಣ್ಣಿಲ್ಲದ ಕುರುಡ ಕನ್ನಡಿಯ ನೋಡಿ ಮೂರು ಕಣ್ಣು ಕಂಡ.**
**ಒಂದು ಧರೆಯ ಕಣ್ಣು, ಒಂದು ಸಿರಿಯ ಕಣ್ಣು**
**ಒಂದು ಉರಿಯ ಕಣ್ಣು.**
**ಉರಿಸಿರಿಯ ನುಂಗಿ, ಸಿರಿ ಧರೆಯ ನುಂಗಿ,**
**ಧರೆ ಅರುಹಿರಿಯರ ನುಂಗಿತ್ತು ಆ ಗುಣವನರಿಯಬೇಕು.**
**ಸದಾಶಿವಮೂರ್ತಿ ಲಿಂಗವ ಬೇಧಿಸಬೇಕು"**

ಇಲ್ಲಿ ಕಣ್ಣಿಲ್ಲದ ಕುರುಡನೆಂದರೆ ಅರಿವಿಲ್ಲದ ವ್ಯಕ್ತಿ. ಅವನು ಅನುಭಾವದ ಕನ್ನಡಿ ನೋಡುತ್ತಾನೆ. ಅಲ್ಲಿ ಅವನಿಗೆ ಕಣ್ಣಿಗೆ ಕಾಣಿಸುವ ಮೂರು ಕಣ್ಣುಗಳೆಂದರೆ ಅಂತಃಕರಣ, ಅಭಿಮಾನ ಮತ್ತು ಅಹಂಕಾರಗಳು. ಅಂತಃಕರಣ ಧರೆಯ ಕಣ್ಣು, ಅಭಿಮಾನ ಸಿರಿಯ ಕಣ್ಣು, ಅಹಂಕಾರ ಉರಿಯ ಕಣ್ಣು. ಅಹಂಕಾರ ಅಭಿಮಾನವನ್ನು ನುಂಗಿ ದುರಹಂಕಾರವಾಗುತ್ತದೆ. ದುರಭಿಮಾನವಾಗುತ್ತದೆ. ದುರಹಂಕಾರ ದುರಭಿಮಾನಿಗಳಿಂದ ಅಂತಃಕರುಣ ಕೆಟ್ಟು ಹೋಗುತ್ತದೆ. ಕೆಟ್ಟುಹೋದ ಅಂತಃಕರಣಕ್ಕೆ ಅರಿತವರು, ಹಿರಿಯರು ಯಾರೂ ಅರ್ಥವಾಗುವುದಿಲ್ಲ. ಅದು ಅವರನ್ನು ನುಂಗಿ ಹಾಕಿ ಬಿಡುತ್ತದೆ. ಈ ಮೂರು ಅವಸ್ಥೆಗಳನ್ನು ಮೀರಿ ಸದಾಶಿವಮೂರ್ತಿ ಲಿಂಗವನ್ನು ಕಂಡು ಕೊಳ್ಳಬೇಕೆನ್ನುತ್ತಾನೆ ಮಾರಿತಂದೆ.

ನಾನು ಮೊದಲೇ ಹೇಳಿದಂತೆ ಇದು ಲೌಕಿಕ ವ್ಯಾಖ್ಯಾನ ದಾರ್ಶನಿಕವಾಗಿ ನಾನಾ ರೂಪದಲ್ಲಿ ಈ ವಚನವನ್ನು ವ್ಯಾಖ್ಯಾನಿಸಬಹುದು. ಆಧ್ಯಾತ್ಮಿಕ ಅರ್ಥದಲ್ಲಿ "ಕಣ್ಣಿಲ್ಲದ ಕುರುಡ" ಎಂದರೆ ಭಿನ್ನ ದೃಷ್ಟಿಯಿಲ್ಲದ ಅಂದರೆ ಪೂರ್ಣ ದೃಷ್ಟಿಯ ಶಿವಜ್ಞಾನಿ. ಅವನಿಗೆ ಕಾಣುವ ಮೂರು ಕಣ್ಣುಗಳು, ಅಂಗ ಜ್ಞಾನ, ಲಿಂಗ ಜ್ಞಾನ ಮತ್ತು ಮಹಾಜ್ಞಾನದ ಕಣ್ಣುಗಳು. ಇಲ್ಲಿನ ಕನ್ನಡಿ - ತನ್ನ ತಾನಿದಿರಿಟ್ಟು ನೋಡಿ ಕಂಡು ತನ್ನ ತಾನರಿಯುವ ಸದ್ವಿವೇಕ. ಇಲ್ಲಿನ ಧರೆ, ಸಿರಿ ಮತ್ತು ಉರಿಯ ಕಣ್ಣುಗಳನ್ನು ಗುರು-ಲಿಂಗ, ಜಂಗಮಕ್ಕೆ ಸದ್ರೂಪ, ಚಿದ್ರೂಪ, ಆನಂದ ರೂಪಕ್ಕೆ, ಭಕ್ತಿ, ಜ್ಞಾನ ವೈರಾಗ್ಯಕ್ಕೆ, ಕಾಯ-ಪ್ರಾಣ-ಆತ್ಮಕ್ಕೆ, ಕ್ರಿಯೆ-ಜ್ಞಾನ - ಭಾವಕ್ಕೆ, ಜೀವಾತ್ಮ ಅಂತರಾತ್ಮ - ಪರಮಾತ್ಮಕ್ಕೆ ಭೂತ - ವರ್ತಮಾನ - ಭವಿಷತ್ತಿಗೆ - ಹೀಗೆ ನಾನಾ ಮುಖಗಳಲ್ಲಿ ಅರ್ಥಮಾಡಲಿಕ್ಕೆ ಸಾಧ್ಯವಿರಬಹುದು. ಅದನ್ನು ಆಧ್ಯಾತ್ಮಿಕ ಅನುಭಾವಿಗಳಿಗೆ ಬಿಡೋಣ. ಸದ್ಯಕ್ಕೆ ಸಾಮಾನ್ಯರಾದ ನಾವು ಸಾಮಾನ್ಯ ಅರ್ಥವನ್ನಷ್ಟೇ ಸ್ವೀಕರಿಸೋಣ. ನಮ್ಮ ಅರಿವು ಹಿಗ್ಗಿದಂತೆ, ಅನುಭಾವ ಬೆಳೆದಂತೆ ಅದರ ವಿಶಾಲಾರ್ಥ ತಿಳಿದು ಆನಂದ ಪಡೋಣ. ಒಟ್ಟಾರೆ ಜ್ಞಾನದ ಕಣ್ಣಿನಿಂದ ಲಿಂಗ ಮತ್ತು ಅಂಗಗಳ ಭೇದವರಿಯಲು ಪ್ರಯತ್ನಿಸಬೇಕು. ಅಂತಹ ಅರಿವುಂಟಾಗದೆ ನಮ್ಮ ಬದುಕು ಹದವಾಗುತ್ತದೆ. ಆ ಅರಿವುಂಟುಮಾಡುವ ಶಿವಾನುಭವದಲ್ಲಿ ನಮ್ಮ ಶ್ರದ್ಧಾ ನಿಷ್ಠೆಗಳು ಬಲಗೊಂಡರೆ, ಸಾಧನೆಯಿಂದ ಸಿದ್ಧಿಯ ಶಿಖರಕ್ಕೆ ಏರಲು ಸಾಧ್ಯ. ಆ ಶಿಖರದ ಎತ್ತರ ಅಳತೆಗೆ ಸಿಕ್ಕುವುದಲ್ಲ. ಅದೊಂದು ಅನಿರ್ವಚನೀಯ ಸ್ಥಿತಿ. ಮರುಳ ಶಂಕರದೇವ ಎಂಬ ಶರಣನ ಒದು ಸೊಗಸಾದ ವಚನವಿದೆ :

ಮಹಾ ಶಕ್ತಿ ಗುರುವೇ ತಂದೆ, ಮಹಾ ಜಂಗಮವೇ ತಾಯಿ.
ಇವರಿಬ್ಬರ ಸಂಯೋಗದಿಂದ ಆನು ಹುಟ್ಟಿದೆ ನೋಡಯ್ಯಾ
ಬಳಿಕ ತಂದೆ ತಾಯಿಗಳಿಬ್ಬರು ಲಿಂಗವೆಂಬ
ಹೆಣ್ಣತಂದು ಎನ್ನ ಕೊರಳಲ್ಲಿ ಕಟ್ಟಿ ಮದುವೆ ಮಾಡಿದರಯ್ಯಾ
ಆ ಹೆಣ್ಣಿನ ಕೈಹಿಡಿದು ಆನು ಬದುಕಿದೆನು.
ಆ ಹೆಣ್ಣಿನ ಸಂಯೋಗದಿಂದ
ಮಗವೆಂಬ ಮಹಾಲಿಂಗ ಹುಟ್ಟಿದನಯ್ಯ
ಆ ಮಗ ಹುಟ್ಟಿದ ಮುನ್ನವೇ ಎನಗೆ ಮರಣವಾಯಿತ್ತು.
ಲಿಂಗವೆಂಬ ಹೆಂಡತಿ ವಿಧವೆಯಾದಳು.
ತಂದೆತಾಯಿಗಳಿಬ್ಬರೂ ಎನ್ನೊಂದಾಗಿ ಅಡಗಿ ಹೋದರು.
ಇನ್ನು ಮುಂದಿನ ಪರಿಯೆಂತುಟಿಲ್ಲವಾಗಿ
ಆನು ಬದುಕಿದನು ಕಾಣಾ, ಶುದ್ಧ ಸಿದ್ಧ, ಪ್ರಸಿದ್ಧ
ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜುನ ದೇವಯ್ಯ
ನಿಮ್ಮ ಶರಣರ ಕರುಣದಿಂದ ಎನ್ನಕರ್ಮ
ನಿರ್ಮಳವಾಯಿತ್ತಯ್ಯಾ, ನಿಮ್ಮ ಧರ್ಮ
ನಿಮ್ಮ ಧರ್ಮ, ನಿಮ್ಮ ಧರ್ಮ!

ಹೀಗೆ ನಮ್ಮ ಬದುಕು ನಿರ್ಮಳವಾಗಬೇಕು. ಹಾಗೆ ನಿರ್ಮಳವಾದಾಗ ಬದುಕು ಭಾರವೆನಿಸುವುದಿಲ್ಲ. ಮನಸ್ಸು ಮುದುಡಿಕೊಳ್ಳುವುದಿಲ್ಲ. ಸಾಧನೆಯ ಶಿಖರವೇರಿದ ಶರಣ ನಮ್ಮ ಜನಪದ ದೃಷ್ಟಿಯಲ್ಲಿ ಕೆಂಜೇಳು ಕಡಿದರೂ, ಪಂಜಿನಲ್ಲಿ ತಿವಿದರೂ ಅಂಜುವುದಿಲ್ಲ.

ಶರಣರ ವಚನಗಳಲ್ಲಿ ಬರುವ ಪರಿಭಾಷೆಗಳೇ ಬೇರೆ. ಅವುಗಳನ್ನು ಗಮನಿಸಿದರೆ ಅವರು ಏರಿದ ಎತ್ತರ ನಮಗೆ ತಿಳಿಯುತ್ತದೆ. ಅವರ ದೃಷ್ಟಿಯಲ್ಲಿ ಅನ್ನಕ್ಕೆ ಹಸಿವಾಗುತ್ತದೆ, ನೀರಿಗೆ ಬಾಯಾರುತ್ತದೆ. ಅಗ್ನಿಗೆ ಛಳಿಯಾಗುತ್ತದೆ. ಆಕಾಶ ಕೈಯಳತೆಗೆ ಸಿಕ್ಕುತ್ತದೆ; ಗಾಳಿ ಕೈಹಿಡಿತಕ್ಕೆ ಸಿಕ್ಕುತ್ತದೆ. ನಾವು ಕಟ್ಟಿಗೆಯನ್ನು ಸುಡಲು ಅಗ್ನಿಯನ್ನು ಬಳಸಿದರೆ ಶರಣರು ಆ ಅಗ್ನಿಯನ್ನೇ ಸುಡುತ್ತಾರೆ, ನಾವು ಕೊಳಕನ್ನು ತೊಳೆಯಲು ನೀರನ್ನು ಬಳಸಿದರೆ, ಅವರು ನೀರನ್ನೇ ತೊಳೆಯುತ್ತಾರೆ. ಅವರ ಅನುಭಾವ ಎಂತಹುದೆಂದರೆ ಬಯಲಿಗೆ ಬೆಂಕಿ ಹಚ್ಚಿ ಬರುವ ಬೂದಿಯನ್ನು ಭಸ್ಮ ಮಾಡಿ ಹಣೆಗೆ ಧರಿಸಿಕೊಳ್ಳುವಂತಹುದು. ಆ ಎತ್ತರಕ್ಕೆ ಏರಲು ನಮಗೆ ಸಾಧ್ಯವಾಗದಿರಬಹುದು. ಆದರೆ ಅವರು ನಡೆದುಹೋದ ಹಾದಿಯಲ್ಲಿ ನಡೆದರೂ ಸಾಕು, ನಾವು ನಿಶ್ಚಿಂತೆ-ನೆಮ್ಮದಿಗಳ ನೆರಳಿನಲ್ಲಿ ನಿಲ್ಲಲು ಸಾಧ್ಯವಿದೆ. ಇದಕ್ಕೆ ಬೇಕಾದುದು ಶ್ರದ್ಧೆ ಮತ್ತು ನಿಷ್ಠೆ. ಅಂತಹ ಜೀವನ ಶ್ರದ್ಧೆ ಮತ್ತು ಭಾವದ ನಿಷ್ಠೆಗಳನ್ನು ಬಲಗೊಳಿಸುವುದೇ ಇಂತಹ ಶಿವಾನುಭವ ಶಿಬಿರಗಳ ಆಶಯ.

ಆದರೆ ದೌರ್ಭಾಗ್ಯ. ಇಂತಹ ಅವಕಾಶಗಳಲ್ಲಿ ತಮಗೆ ಆಸಕ್ತಿಯಲ್ಲ. ನಮ್ಮ ಆಸಕ್ತಿಗಳು ವಿಲಕ್ಷಣ, ವಿಚಿತ್ರ, ವಿಕೃತ. ಆ ಕಾರಣದಿಂದಲೇ ಇಂದಿನ ಬದುಕು ನೆಮ್ಮದಿಯಿಂದ ದೂರ ದೂರವಾಗುತ್ತಿರುವುದು. ವ್ಯಕ್ತಿಯ ಮನಸ್ಸು ಮಲಿನವಾಗಿರುವ ಕಾರಣ ನಮ್ಮ ಸಾಮಾಜಿಕ ಪರಿಸರ ಎಂತಹ ಗತಿಗೆ ಬಂದಿದೆ ಎಂಬುದನ್ನು ನಿಮಗೆ ಬೇರೆ ಹೇಳಬೇಕಾಗಿಲ್ಲ.

ಇಂದು ಆರ್ಥಿಕ ಉದಾರೀಕರಣ ಮತ್ತು ಮುಕ್ತ





ಮಾರುಕಟ್ಟೆಗಳ ಬಿರುಗಾಳಿ ಬೀಸುತ್ತಿದೆ. ಭಾರತದ ಜೀವನ ಧರ್ಮ ಮತ್ತು ಸಂಸ್ಕೃತಿಗಳಿಗೆ ಅನೂನ್ಯ ಆಘಾತವುಂಟಾಗುತ್ತಿದೆ. ಈ ಧಕ್ಕೆಯ ದಾಳಿಯನ್ನು ಎದುರಿಸುವ ಸಾಮರ್ಥ್ಯವಿರುವ ಒಂದು ವಿಚಾರ ಧಾರೆಯೆಂದರೆ ಶರಣ ಸಿದ್ಧಾಂತ. ಶಿವಾನುಭವ ಸಿದ್ಧಾಂತ. ಈ ಸಿದ್ಧಾಂತದ ವಿಶಿಷ್ಟ ಸತ್ವವೆಂದರೆ ಸಮರ್ಥ ಮಾನವ ನಿರ್ಮಾಣ. ಸಭ್ಯಮಾನವ ನಿರ್ಮಾಣ. ಶ್ರಮಜೀವಿ ಮಾನವ ನಿರ್ಮಾಣ. ಒಟ್ಟಾರೆ ಇಹಕ್ಕೆ ಸಲ್ಲುವ ಪರಿಪೂರ್ಣ ಮಾನವ ನಿರ್ಮಾಣ. ಸಮರ್ಥ, ಸಭ್ಯ ಹಾಗೂ ಶ್ರಮಜೀವಿ ಮಾನವ ನಿರ್ಮಾಣ ಮೊದಲಾಗದಿದ್ದರೆ ಉಳಿದ ಯಾವ ನಿರ್ಮಾಣಗಳೂ ನಿಲ್ಲುವುದಿಲ್ಲ. ಅವು ಕೇವಲ ಕೃತಕ ಗೋಪುರಗಳಾಗುತ್ತವೆ.

ಈ ದೃಷ್ಟಿಯಿಂದ ಇಲ್ಲಿ ನಡೆದ ಶಿವಾನುಭವ ಶಿಬಿರ ಸಪ್ತಾಹ ಕೆಲವರಲ್ಲಾದರೂ, ಕೆಲಮಟ್ಟಿಗಾದರೂ ಸಾತ್ವಿಕ ಬದುಕಿನ ಬಗ್ಗೆ ಶ್ರದ್ಧೆ -ನಿಷ್ಠೆಗಳನ್ನು ದೃಢಗೊಳಿಸಿದೆ ಎಂಬ ನಂಬಿಕೆ ನನಗಿದೆ. ಹನ್ನೆರಡನೆಯ ಶತಮಾನದಲ್ಲಿ ನಡೆದ ಶರಣ ಕ್ರಾಂತಿಯ ಕಿರಣಗಳಾಗಿ ಈಗಲೂ ಅಲ್ಲಲ್ಲಿ ಕೆಲವು ಧರ್ಮಗುರುಗಳು ಇಂತಹ ಮಾನವ ನಿರ್ಮಾಣದ ಮಣಿಕ ಕೈಗೊಂಡಿರುವುದು ಸಮಾಧಾನದ ಸಂಗತಿ. ಆ ಶರಣ ಕ್ರಾಂತಿಯ ದೀಪ ಹಚ್ಚುವ ಮಹಾದಾರ್ಶನಿಕ ಬಸವಣ್ಣನವರನ್ನು ಮನಮುಟ್ಟಿ ನೆನೆದಿರುವ ಶಿವಯೋಗಿ ಸಿದ್ದರಾಮಣ್ಣನ ವಚನದೊಂದಿಗೆ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಇಂದಿನ ಜಾನಪದ ಚಿಂತನ ಕಾರ್ಯಕ್ರಮವನ್ನು ವಿನಮ್ರವಾಗಿ ಉದ್ಘಾಟಿಸಿದ್ದೇನೆ. ಒಂದು ವಾರದಲ್ಲಿ ನಡೆದ ಶಿವಾನುಭವ ಶಿಬಿರದ ಮಂಗಲ ಗೀತೆಗೆ ನಾನೂ ದನಿಗೂಡಿಸುತ್ತೇನೆ.

ಬಸವಣ್ಣನೆಂಬ ಗುರುವ ಪಿಡಿದು
ಮಡಿವಾಳಯ್ಯ ಬಸವಣ್ಣನಂತಾದ
ಬಸವಣ್ಣನೆಂಬ ಲಿಂಗವ ಪಿಡಿದು
ಚೆನ್ನಬಸವಣ್ಣ ಬಸವಣ್ಣನಂತಾದ
ಬಸವಣ್ಣನೆಂಬ ಜಂಗಮವ ಪಿಡಿದು
ಸಿದ್ಧಾರಾಮಯ್ಯ ಬಸವಣ್ಣನಂತಾದ
ಪ್ರಭುದೇವ ಸಾಕ್ಷಿಯಾಗಿ ಬಸವಣ್ಣನ
ಶ್ರೀಪಾದಕ್ಕೆ ನಮೋನಮೋ ಎನುತಿರ್ಪೆನು
ಗುರು-ಚರ-ಪರ-ಇಷ್ಟಲಿಂಗ
ಶುದ್ಧಪ್ರಸಾದ ಪರಂಜ್ಯೋತಿ ಗುರುಪ್ರಭುವೆ
ಶರಣಯ್ಯ ಯೋಗಿನಾಥ!

- ಸಿದ್ಧರಾಮ

ಸಮಸ್ತರಿಗೂ ಶರಣು ಶರಣಾರ್ಥಿ

---

* ತುಮಕೂರಿನಲ್ಲಿ ದಿನಾಂಕ ೧೧.೧೦.೯೮ರಂದು ನಡೆದ 27ನೆಯ ಶಿವಾನುಭವ ತರಬೇತಿ ಶಿಬಿರದ ಮಂಗಲ ಸಮಾರಂಭದಲ್ಲಿ ನಡೆದ ಜಾನಪದ ಚಿಂತನ ಕಾರ್ಯಕ್ರಮದ ಉದ್ಘಾಟನಾ ಭಾಷಣ.

## ಬಸವ ಚೇತನ

ಸಕಲ ಜೀವರಾಶಿಗಳ ಲೇಸು ಬಯಸಿದ, ಮಾನವ ಕುಲದ ಕಲ್ಯಾಣಕ್ಕಾಗಿ ಅರಿವು-ಆಚಾರ-ಅನುಭಾವ ತಳಹದಿಯ ಲಿಂಗಾಯತ ಧರ್ಮವನ್ನು ಸ್ಥಾಪಿಸಿದ ವಿಶ್ವಗುರು ಬಸವಣ್ಣನವರ ೧೨ನೇ ಶತಮಾನದ ಕಾಯಕ ದಾಸೋಹ 'ಪ್ರಸಾದ ತತ್ವ' ಸಿದ್ಧಾಂತ ಸಂಸ್ಕೃತಿ ಪರಂಪರೆಯನ್ನು ೨೦ನೇ ಶತಮಾನದಲ್ಲಿ ಕ್ರಿಯಾಶೀಲವಾಗಿ ನಡೆಸುತ್ತಿರುವ ಪೂಜ್ಯಪಾದರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಸವಚೇತನ ಸ್ವರೂಪಿಗಳಾಗಿದ್ದಾರೆ.

ಪರಮಪೂಜ್ಯ ಡಾ. ಶಿವಕುಮಾರ ಮಹಾಶಿವಯೋಗಿಗಳು ಶುದ್ಧ ಪ್ರಸಾದ - ಸಿದ್ಧಪ್ರಸಾದ - ಪ್ರಸಿದ್ಧ ಪ್ರಸಾದವನ್ನು ಸಿದ್ಧಗಂಗಾ ಮಠದ ಮೂಲಕ ಎಡೆಮಾಡುತ್ತಾ ತ್ರಿವಿಧ ದಾಸೋಹಮೂರ್ತಿಗಳಾಗಿದ್ದಾರೆ. ಪೂಜ್ಯ ಶ್ರೀಗಳವರು ವಯೋವೃದ್ಧರೂ, ಜ್ಞಾನವೃದ್ಧರೂ, ಅನುಭಾವವೃದ್ಧರೂ ಆಗಿದ್ದಾರೆ. ಅವರು ತನು, ಮನ, ಭಾವಂಗಳಲ್ಲಿ ಬಸವತತ್ವ ತುಂಬಿ ಪ್ರವಹಿಸುತ್ತಿದೆ. ಬಸವಗುರು ಅವರಿಗೆ ಮಂತ್ರ ಪುರುಷ. ಬಸವ ಸಂದೇಶ ಅವರ ಬಾಳಿನ ಉಸಿರಾಗಿದೆ.

ಪೂಜ್ಯರ ಬಾಳು - ಲಿಂಗಮಯವಾಗಿದೆ. ಪೂಜ್ಯರು ನಡೆಲಿಂಗ, ನುಡಿಲಿಂಗವಾಗಿದ್ದಾರೆ. ಕೂಡಲ ಸಂಗನ ರಾಜತೇಜದಲ್ಲಿಪ್ಪ ಪೂಜ್ಯರು ಲಿಂಗಮೆಚ್ಚಿ ಅಹುದಹುದೆನ್ನುವಂತೆ ಅನುಭಾವ ನೀಡುತ್ತಾರೆ. ಪೂಜ್ಯರ ಜೀವನ ಸಾಧನೆಗಳು ನಾಡಿನ ಮಠಾಧಿಪತಿಗಳಿಗೆ ಆದರ್ಶ ಹಾಗೂ ಅನುಕರಣೀಯವಾಗಿವೆ. ಪೂಜ್ಯರು ನಾಡಿನ ಗುರು ಜಗದ್ಗುರುಗಳಿಗೆ, ಮಠ ಪೀಠಾಧಿಪತಿಗಳಿಗೆಲ್ಲ ಬಸವ ಜ್ಯೋತಿ ಸ್ವರೂಪರಾಗಿದ್ದಾರೆ.

- ಶ್ರೀ ಮ. ನಿ. ಪ್ರ. ಮಹಾಂತ ಶಿವಯೋಗಿಗಳು
ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠ, ಇಳಕಲ್ಲು.



# 'ಸಿದ್ಧಗಂಗಾ' ಮಾಸ ಪತ್ರಿಕೆ ಆಜೀವ ಸದಸ್ಯರಲ್ಲಿ ಒಂದು ಮನವಿ

ಶ್ರೀ ಮಠದ ಮುಖವಾಣಿಯಾಗಿ 'ಸಿದ್ಧಗಂಗಾ' ಮಾಸಪತ್ರಿಕೆ 34ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ನಾಡಿನಾದ್ಯಂತ ಪ್ರಸಾರ ಹೊಂದಿದೆ. ನೀವು ಅಜೀವ ಸದಸ್ಯತ್ವ ಹೊಂದಿ ಪತ್ರಿಕೆಯ ಅಭಿವೃದ್ಧಿಗೆ ನೀಡಿದ ಸಹಕಾರಕ್ಕೆ ಕೃತಜ್ಞತೆಗಳು.

'ಸಿದ್ಧಗಂಗಾ' ಮಾಸಪತ್ರಿಕೆ ಪ್ರಗತಿಯ ಬಗ್ಗೆ ನಿಮ್ಮೊಡನೆ ಸಮಾಲೋಚನೆ ಮಾಡುವ ಸಂದರ್ಭ ಇದೀಗ ಒದಗಿ ಬಂದಿದೆ. ಸಿದ್ಧಗಂಗಾ ಜನವರಿ 1998ರಿಂದ ಆಕರ್ಷಕ ಮುಖಪುಟ, ವಿನ್ಯಾಸ ಮತ್ತು ಮೌಲಿಕ ಲೇಖನಗಳಿಂದ ಪ್ರಕಟವಾಗುತ್ತಿದ್ದು ವಿದ್ವಾಂಸರ ಹಾಗೂ ಓದುಗರ ಮೆಚ್ಚಿಗೆಗೆ ಪಾತ್ರವಾಗಿದೆ. ಜೊತೆಗೆ ಮುದ್ರಣ ವೆಚ್ಚವೂ ಅಧಿಕವಾಗಿದೆ ಎಂಬ ಅಂಶವನ್ನು ತಮ್ಮ ಗಮನಕ್ಕೆ ತರಬಯಸುತ್ತೇವೆ. ಈ ಹೆಚ್ಚುವರಿ ವೆಚ್ಚವನ್ನು ಸರಿದೂಗಿಸುವುದು ಪ್ರಸಕ್ತ ಸನ್ನಿವೇಶದಲ್ಲಿ ಕಷ್ಟವಾಗಿದೆ ಎಂಬುದು ತಮಗೆ ತಿಳಿದಿರುವ ವಿಷಯವೇ ಆಗಿದೆ ಎಂದು ಭಾವಿಸುತ್ತೇವೆ. ಪ್ರಾರಂಭದಲ್ಲಿ 101/-, 157/-, 201/-, 251/-, 301/-, 351/- ರೂ.ಗಳನ್ನು ನೀಡಿದ ಆಜೀವ ಸದಸ್ಯತ್ವದ ಚಂದಾ ಹಣದ ನಿಶ್ಚಿತ ಠೇವಣಿಯಿಂದ ದೊರೆಯುತ್ತಿರುವ ಬಡ್ಡಿ, ಪ್ರಸ್ತುತ ಹೊಸ ವಿನ್ಯಾಸದಿಂದ ಹೊರತರುತ್ತಿರುವ 12 ಸಂಚಿಕೆಗಳಿಗೆ ಕಾಗದ, ಮುದ್ರಣ ಮತ್ತು ಇತರೇ ಖರ್ಚು ವೆಚ್ಚಗಳಿಗೆ ಸಾಲದಾಗಿದೆ. ಈ ಹೆಚ್ಚುವರಿ ಖೋತಾ ಮೊತ್ತವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಭರಿಸಬೇಕಾಗಿ ಬಂದಿದೆ.

ಮಹಾದಾಸೋಹವನ್ನು ನಿರಂತರವಾಗಿ ನಡೆಸಿಕೊಂಡು ಬರುತ್ತಿದ್ದು, 5,000 ವಿದ್ಯಾರ್ಥಿಗಳ ಭವ್ಯ ಭವಿಷ್ಯವನ್ನು ರೂಪಿಸುವ ಮಣಿಹದಲ್ಲಿ ನಿರತರಾಗಿರುವ ಪರಮಪೂಜ್ಯ ಶ್ರೀ ಶ್ರೀಗಳವರಿಗೆ 'ಸಿದ್ಧಗಂಗಾ' ಮಾಸಪತ್ರಿಕೆ ಪ್ರಕಟಣೆಯು ಹೊರೆಯಾಗದಂತೆ ಆಜೀವ ಸದಸ್ಯರು ಹಾಗೂ ಸಹೃದಯಿ ಓದುಗರು ನೆರವಾಗಬೇಕಾಗಿದೆ. ಈ ಮೇಲೆ ಸೂಚಿಸಿರುವ ಆಜೀವ ಚಂದಾ ಹಣವನ್ನು ನೀಡಿ ಸದಸ್ಯರಾಗಿರುವ ಮಾನ್ಯ ಸದಸ್ಯರು ನಮ್ಮ ಮನವಿಯನ್ನು ಮಾನ್ಯ ಮಾಡಿ ಉದಾರದಿಂದ ಸಹಕಾರ ನೀಡಬೇಕಾಗಿದೆ. ಇದರಿಂದ ಪತ್ರಿಕೆಯ ಗುಣಮಟ್ಟವನ್ನು ಕಾಪಾಡಿಕೊಳ್ಳಲು ಹಾಗೂ ಮತ್ತಷ್ಟು ಆಕರ್ಷಕವಾಗಿ ಹೊರತರಲು ಸಾಧ್ಯವಾಗುತ್ತದೆ.

ಪ್ರಸ್ತುತ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯತ್ವ 500 ರೂ.ಗಳೆಂದು ನಿಗದಿ ಮಾಡಲಾಗಿದೆ. ತಾವು ದಯವಿಟ್ಟು ಈ ಮೊತ್ತಕ್ಕೆ ಸರಿಹೊಂದುವಂತೆ ಉಳಿಕೆ ಮೊಬಲಗನ್ನು (ಹಿಂದೆ ಸಂದಾಯ ಮಾಡಿರುವ ಆಜೀವ ಸದಸ್ಯತ್ವ ಚಂದಾ ಹಣವನ್ನು ಕಳೆದು) ನಗದು / ಎಂ.ಓ. / ಚೆಕ್ / ಡಿ.ಡಿ. ಮೂಲಕ 'ಸಿದ್ಧಗಂಗಾ ಮಾಸಪತ್ರಿಕೆ' ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ಬಿನ್ನವಿಸಿಕೊಳ್ಳುತ್ತೇವೆ.

**ಪ್ರಕಾಶಕರು,** ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು-572104

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

ವಿ.ಸೂ.
1. ವ್ಯವಹರಿಸುವಾಗ ನಿಮ್ಮ ಆಜೀವ ಸದಸ್ಯತ್ವದ ಸಂಖ್ಯೆಯನ್ನು ಸೂಚಿಸಿ. ಇದು ಪತ್ರಿಕೆ ರವಾನಿಸುವಾಗ ನಿಮ್ಮ ವಿಳಾಸದಲ್ಲಿ ನಮೂದಿಸಿರುತ್ತದೆ.
2. ಎಲ್ಲಾ ಆಜೀವ ಸದಸ್ಯರ ಭಾವಚಿತ್ರವನ್ನು ಮಾಸ ಪತ್ರಿಕೆಯಲ್ಲಿ ಪ್ರಕಟಿಸುವ ಉದ್ದೇಶ ಹೊಂದಲಾಗಿದೆ. ಮೊದಲು ಕಳುಹಿಸಿದವರಿಗೆ ಮೊದಲ ಆದ್ಯತೆಯ ಮೇಲೆ ಹಂತ ಹಂತವಾಗಿ ಸ್ಥಳಾವಕಾಶಕ್ಕೆ ಅನುಗುಣವಾಗಿ ಪ್ರಕಟಿಸಲಾಗುವುದು. ತಾವು ದಯವಿಟ್ಟು ತಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಕಳುಹಿಸಿಕೊಡಬೇಕಾಗಿ ವಿನಂತಿ.







# ಸ್ವಾತಂತ್ರ್ಯ ಸುವರ್ಣ

- ಎಂ. ಜಿ. ನಾಗರಾಜ್
ಸಂಶೋಧಕರು ಮತ್ತು ಇತಿಹಾಸ ತಜ್ಞರು,
ಬೆಂಗಳೂರು

ಸ್ವಾತಂತ್ರ್ಯ ಎಂದರೆ ಇನ್ನೊಬ್ಬರ ಹಂಗಿಲ್ಲದೆ ಬಾಳುವುದು. ಆದರೆ ಈ ಸ್ವಾತಂತ್ರ್ಯ ಅನ್ಯರಿಗೆ ಕೇಡು ಮಾಡುವಂತಿರಬಾರದು. ಸ್ವಾತಂತ್ರ್ಯವೆಂಬುದು ಸ್ವೇಚ್ಛೆಯ ತಂತ್ರವಲ್ಲ. ಸ್ವಇಚ್ಛಾ ವಿಕೃತ ಕೃತ್ಯಗಳಲ್ಲ; ಬದಲು ಸ್ವಯಂ ಶಿಸ್ತನ್ನು ಪಾಲಿಸಿ ಸತ್ಪ್ರಜೆಯಾಗಿ ಪರಾವಲಂಬನವಲ್ಲದ ಬಾಳನ್ನು ಬಾಳುವಂತಹದು.

ವ್ಯಕ್ತಿ ಸ್ವಾತಂತ್ರ್ಯವಿದೆ ಎಂದು ನಮ್ಮ ಅಭಿವ್ಯಕ್ತಿ ಅನ್ಯರಿಗೆ ಹಾನಿತರಬಾರದು. ಸಮುದಾಯಕ್ಕೆ ಸ್ವಾತಂತ್ರ್ಯವಿದೆಯೆಂದು ಪಿತೂರಿ ಮಾಡಿ ದೇಶಕೋಶಗಳನ್ನು ಹಾಳುಮಾಡಬಾರದು. ಸ್ವಾರ್ಥವು, ಮಾನವ ಸ್ವಭಾವವೆನಿಸಿದರೂ ಸಮಾಜ, ರಾಷ್ಟ್ರಗಳಿಗೆ ಕೇಡು ತರಬಾರದು.

ರಷ್ಯಾದೇಶಕ್ಕೆ ಸ್ವಾತಂತ್ರ್ಯ ಬಂದಾಗ ಒಬ್ಬ ಹೆಂಗಸು ನಡು ರಸ್ತೆಯಲ್ಲಿ ಹಾದು ಹೋಗುತ್ತಿದ್ದಳಂತೆ. ಪೋಲಿಸಿನವ ಎಚ್ಚರಿಸಿದಾಗ ನಮಗೆ ಸ್ವಾತಂತ್ರ್ಯ ಬಂದಿದೆ. ಎಲ್ಲಿಯಾದರೂ ಅಡ್ಡಾಡುವೆ? ನಿನ್ನದೇನು ಅಡ್ಡಿ? ಎಂದಳಂತೆ. ಆಗ ಪೋಲಿಸಿನವ ನುಡಿದ : ನಿನ್ನ ಹಾಗೆಯೇ ರಸ್ತೆಯಲ್ಲಿ ವಾಹನ ಬಿಟ್ಟುಕೊಂಡು ಬರುತ್ತಿರುವವರು ಯೋಚಿಸಿದರೆ ನಿನ್ನ ಜೀವದ ಗತಿ ಏನಾಗುತ್ತದೆ ಬಲ್ಲೆಯಾ? ಎಂದನಂತೆ. ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರ ಅಲ್ಲ ಎಂಬುದು ಇಲ್ಲಿನ ದನಿಯಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ದೇಶದ ಸ್ವಾತಂತ್ರ್ಯದ ಇತಿಹಾಸವನ್ನು ಗಮನಿಸೋಣ. ಸ್ವಾತಂತ್ರ್ಯ ಗಳಿಸುವ ಮುನ್ನಿನ ನಮ್ಮ ಹೋರಾಟದ ಕೆಚ್ಚು, ತ್ಯಾಗ, ಬಲಿದಾನ, ನಿಸ್ವಾರ್ಥ ಇಂದು ಯಾವ ಪ್ರಮಾಣದಲ್ಲಿ ಉಳಿದಿದೆ!

> **ಸ್ವಾತಂತ್ರ್ಯ ಎಂದರೆ ಇನ್ನೊಬ್ಬರ ಹಂಗಿಲ್ಲದೆ ಬಾಳುವುದು. ಆದರೆ ಈ ಸ್ವಾತಂತ್ರ್ಯ ಅನ್ಯರಿಗೆ ಕೇಡು ಮಾಡುವಂತಿರಬಾರದು. ಸ್ವಾತಂತ್ರ್ಯವೆಂಬುದು ಸ್ವೇಚ್ಛೆಯ ತಂತ್ರವಲ್ಲ. ಸ್ವಇಚ್ಛಾ ವಿಕೃತ ಕೃತ್ಯಗಳಲ್ಲ; ಬದಲು ಸ್ವಯಂ ಶಿಸ್ತನ್ನು ಪಾಲಿಸಿ ಸತ್ಪ್ರಜೆಯಾಗಿ ಪರಾವಲಂಬನವಲ್ಲದ ಬಾಳನ್ನು ಬಾಳುವಂತಹದು.**

ಈ ದೇಶದ ಸ್ವಾತಂತ್ರ್ಯವನ್ನು ಹರಣ ಮಾಡಲು ಪರ್ಶಿಯನ್ನರು ಗ್ರೀಕರು, ಕುಶಾಣರು, ಹೂಣರು, ಫ್ರೆಂಚರು, ಪೋರ್ಚುಗೀಸರು, ಡಚ್ಚರು, ಇಂಗ್ಲೀಷರು ಬಂದರು. ಆದರೆ ಡಚ್ಚರು, ಫ್ರೆಂಚ್‌ರು, ಪೋರ್ಚುಗೀಸರು, ಇಂಗ್ಲೀಷರು ಉಳಿದವರಂತೆ ಇಲ್ಲಿನವರಾಗಿ ಉಳಿದುಕೊಳ್ಳಲಿಲ್ಲ. ವ್ಯಾಪಾರ ವ್ಯವಹಾರ ಲಾಭ ಸೂರ್ಯಮುಳುಗದ ಸಾಮ್ರಾಜ್ಯದ ನನಸುಗಳಲ್ಲಿ ಅವರು ತೊಡಗಿಸಿಕೊಂಡು ಬಿಟ್ಟರು. ಅಂತಾಗಿ ಆತ್ಮೀಯ ಸ್ಪರ್ಶ ಭಾರತದ ಒಳ ಮಾನಸಗಳಲ್ಲಿ ಅವರು ಪಡೆಯಲಿಲ್ಲವೆನಿಸುತ್ತದೆ. ಹಾಗೆಂದು ಅವರಲ್ಲಿನ ಅನೇಕ ಕೊಡುಗೆಗಳನ್ನು ನಿರಾಕರಿಸುವಂತಿಲ್ಲ. ಇರಲಿ, ಬ್ರಿಟಿಷರೆದುರಾಗಿ ಪ್ಲಾಸಿಕದನದ ನಂತರ, ಪಾಣಿಪಟ್ ಯುದ್ಧ, ಬಕ್ಸಾರ್ ಯುದ್ಧ, ಇವೆಲ್ಲ ಸೈನ್ಯ ಸೈನ್ಯಗಳ ನಡುವಿನ ಯುದ್ಧ ಹೋರಾಟವಾಗಿತ್ತು. ಮುಂದೆ ಜನ ಸಮ್ಮಿಲಿತ ಸ್ವಾತಂತ್ರ್ಯ ಹೋರಾಟಗಳು ಕೊಡಗಿನ ಚಿಕ್ಕವೀರರಾಜೇಂದ್ರ, ಹೈದರ್, ಟಿಪ್ಪು ಐಗೂರಿನ ವೆಂಕಟಾದ್ರಿನಾಯಕ, ಸಿಂಧಗಿ ಕ್ರಾಂತಿಕಾರರು ಆದಿವಾಸಿ ಸಂತಾಲರು, ಕಿತ್ತೂರು ಚನ್ನಮ್ಮ ಸಂಗೊಳ್ಳಿರಾಯಣ್ಣ, ಝಾನ್ಸಿ ಲಕ್ಷ್ಮಿಬಾಯಿ, ಬಹದ್ದೂರ್ ಷಾ, ಸುರಪುರದ ವೆಂಕಟಪ್ಪನಾಯಕ, ಮುಂಡರಗಿ ಭೀಮರಾಯ, ಹಲಗಲಿಯ ಬೇಡರು ಇವರೆಲ್ಲರ ಮೂಲಕ ಸಾಗಿ ಬಂದಂತಾಗಿವೆ. ಇವೆಲ್ಲಕ್ಕೂ ಮಕುಟವಾಗಿ ಗಾಂಧೀಜಿಯ ಸ್ವಾತಂತ್ರ್ಯ ಹೋರಾಟ, ರಾಷ್ಟ್ರೀಯ ವ್ಯಾಪ್ತಿಯನ್ನು ವೃದ್ಧಿಸಿತು. ಅಂದರೆ ಬೇರಿನಿಂದ ಶಿರದವರೆಗೆ ಭಾರತದ ಜನಸಮುದಾಯ ಅವರ ಹಿಂದೆ ನಿಂತಿತು. ಖಿಲಾಫತ್ ಚಳುವಳಿ, ಉಪ್ಪಿನ ಸತ್ಯಾಗ್ರಹ, ಕರನಿರಾಕರಣ ಚಳುವಳಿ, ಅರಣ್ಯ ಸತ್ಯಾಗ್ರಹ, ಅಸ್ಪೃಶ್ಯೋದ್ಧಾರ ಇತ್ಯಾದಿ ಚಳುವಳಿಗಳು ಅಹಿಂಸಾತ್ಮಕ ನೆಲೆಯಲ್ಲಿ ಯಶಸ್ವಿಯಾಗಿ ನಡೆದುವು. ಕರ್ನಾಟಕದ ದೃಷ್ಟಿಯಿಂದ ಅಂಕೋಲದ ಉಪ್ಪಿನ ಸತ್ಯಾಗ್ರಹ, ಧಾರವಾಡದ ಕರಚೀಟಿ ಚಳುವಳಿ, ಬೆಂಗಳೂರು, ಮೈಸೂರುಗಳಲ್ಲಿಯ ಅಸಹಕಾರ ಚಳುವಳಿ, ಶಿವಪುರ ಧ್ವಜ ಸತ್ಯಾಗ್ರಹ ಇತ್ಯಾದಿಗಳು ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಈ ನೆಲದ ಕೊಡುಗೆಗಳಾಗಿವೆ. ದೇಶದ ಸ್ವಾತಂತ್ರ್ಯ ಉಳಿಯಬೇಕಾದರೆ, ಸ್ವೇಚ್ಛೆಸಲ್ಲದ, ಮೌಲಿಕ ಚಟುವಟಿಕೆ, ತ್ಯಾಗದ ಸ್ಫೂರ್ತಿ, ನೈತಿಕ ನಿಷ್ಠೆ, ದೇಶಪ್ರೇಮ, ಸಮುದಾಯ ಪ್ರೀತಿ ಬೆಳೆದು ಜೀವಂತಿಕೆ ತೋರಬೇಕಾಗಿದೆ.

## ರಸಸರಸ್ವತಿ ಡಾ. ಪು.ತಿ.ನ.



ಕನ್ನಡಕಾವ್ಯಜಗತ್ತಿನ ಆಧುನಿಕ ರತ್ನತ್ರಯರಲ್ಲಿ ಒಬ್ಬರಾಗಿದ್ದ ಡಾ. ಪು.ತಿ.ನ. ಅವರು ದಿನಾಂಕ ೧೩-೧೦-೯೮ರಂದು ಅಸ್ತಂಗತರಾದರು. 'ಹಣತೆ'ಯನ್ನು ಹಚ್ಚಿದ ಕವಿ ಬೆಳಕನ್ನು ಕೊಟ್ಟು ಕಣ್ಮರೆಯಾದರು. ಕಾವ್ಯ ತಪಸ್ವಿ, ಚಿಂತನಶೀಲ, ಜಿಜ್ಞಾಸು, ಮೃದು ಭಾಷಿ, ಭಾಷೆಭಾವಗಳಹದವರಿತ ಸಾಹಿತ್ಯಶಿಲ್ಪಿ, ಸೃಜನಶೀಲ, ಸಾಹಿತ್ಯ ಜಗತ್ತಿನ ದಿಗ್ಗಜ ಎಂದು ಪು.ತಿ.ನ (ಪುರೋಹಿತ ತಿರುನಾರಾಯಣ ನರಸಿಂಹಾಚಾರ್) ಹೆಸರಾಗಿದ್ದರು. ಮೇಲುಕೋಟೆಯಲ್ಲಿ ಹುಟ್ಟಿದ ಪು.ತಿ.ನ. 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ' ಎಂಬ ಸೂಕ್ತಿಗೆ ಭಾಷ್ಯವಾಗಿದ್ದರು. ಹುಟ್ಟಿದೂರಿನ ಮೇಲೆ ಅನನ್ಯ ಪ್ರೇಮ. ಕಾವ್ಯ, ನಾಟಕ, ಲಲಿತ ಪ್ರಬಂಧ, ಕಾವ್ಯಾರ್ಥ ಚಿಂತನೆ, ಅನುವಾದ ವೈವಿಧ್ಯಗಳಿಂದ ಅವರ ಸಾಹಿತ್ಯ ಕೃಷಿ ಶ್ರೀಮಂತವಾಯಿತು. 'ಅಹಲ್ಯೆ,' ಗೋಕುಲ ನಿರ್ಗಮನ, ಅತಿಥಿ, ವಿಕಟಕವಿ ವಿಜಯ, ಶ್ರೀ ಹರಿಚರಿತೆ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಗಳಿಂದ ಪ್ರಶಸ್ತಿ ಪುರಸ್ಕೃತರಾಗಿದ್ದರು. ಪದ್ಮಶ್ರೀ ಪ್ರಶಸ್ತಿಯನ್ನು ಪಡೆದ ಹೆಗ್ಗಳಿಕೆ ಇವರದಾಗಿತ್ತು. ಅನೇಕ ಸಂಘ ಸಂಸ್ಥೆಗಳಿಂದ ಸನ್ಮಾನಿತರಾಗಿದ್ದ ಪು.ತಿ.ನ ಅವರು ಚಿಕ್ಕಮಗಳೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿತರಾಗಿದ್ದರು. ಪರಮಸಾತ್ವಿಕ, ಚಿಂತನಶೀಲ ಪ್ರತಿಭೆಯ ಶ್ರೇಷ್ಠ ಪ್ರತಿನಿಧಿ, ಮೊದಲ ದರ್ಜೆಯ ಗೀತ ರೂಪಕಾರ, ಋಷಿ ಸದೃಶವ್ಯಕ್ತಿ, ಪುರಾತನ ಸಂಸ್ಕೃತಿಯ ಪ್ರತಿರೂಪ, ಸಜ್ಜನಿಕೆಯ ಸಾಕಾರಮೂರ್ತಿ ಎಂದು ಪ್ರೀತಿ ಶ್ರೀಮಂತಿಕೆಗಳಿಸಿದ್ದ ಪು.ತಿ.ನ ಅವರ ಅಗಲಿಕೆಯಿಂದ ಕನ್ನಡ ಸಾರಸ್ವತ ಜಗತ್ತು ಅಪಾರ ನಷ್ಟಕ್ಕೊಳಗಾಗಿದೆ.

ದಯಾಮಯನಾದ ಪರಶಿವನು ಅಗಲಿದ ಕವಿ ಪು.ತಿ.ನ.ರವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸಂತಾಪ ಸೂಚಿಸಿದ್ದಾರೆ.

ದಿವಂಗತರ ಆತ್ಮಕ್ಕೆ ದಯಾಮಯನಾದ ಪರಶಿವನು ಚಿರಶಾಂತಿಯನ್ನೀಯಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

## ಶ್ರೀ ಟಿ. ಅನಂತರಾಮ ಶ್ರೇಷ್ಠಿ



ರಾಜ್ಯ ಪ್ರಶಸ್ತಿ ವಿಜೇತರೂ, ಸ್ವಾತಂತ್ರ್ಯ ಹೋರಾಟಗಾರರೂ, ತುಮಕೂರಿನ ಆರ್ಯವೈಶ್ಯಮಂಡಲಿಯ ಕಣ್ಮಣಿಗಳೂ, ತುಮಕೂರು ನಗರದ ಅಭಿವೃದ್ಧಿಗಾಗಿ ಶ್ರಮಿಸಿದ ಪುರಪಿತೃಗಳೂ ಆಗಿದ್ದ ಶ್ರೀಯುತರು ದಿನಾಂಕ ೧೦-೧೦-೯೮ರಂದು ನಿಧನರಾದರು. ಅವರ ನಿಧನದಿಂದ ಸಮಾಜ ಗಣ್ಯ ವ್ಯಕ್ತಿಯನ್ನು ಕಳೆದುಕೊಂಡಂತಾಗಿದೆ. ಉದಾರಿಗಳಾಗಿದ್ದ ಶ್ರೀ ಶ್ರೇಷ್ಠಿಯವರು ವರ್ಚಸ್ವೀ ವ್ಯಕ್ತಿತ್ವವನ್ನುಳ್ಳವರಾಗಿದ್ದರು. ಆರ್ಷೇಯ ಜೀವನದ ಮೌಲ್ಯಗಳಲ್ಲಿ ಅಪಾರ ಶ್ರದ್ಧೆ ಅವರದಾಗಿತ್ತು. ಮೃದುವಾದ ಮಾತು, ನಿಖರವಾದ ಅಭಿಪ್ರಾಯ, ಹಿರಿಕಿರಿಯರಲ್ಲಿ ಬೆರೆತು ಬಾಳುವ ಹಿರಿಯತನ, ಶೀಲ ಸೌಜನ್ಯಗಳ ಸಂಗಮವೆನಿಸಿದ್ದರು. ಶ್ರೀ ಸಿದ್ಧಗಂಗಾ ಮಠದ ಅವಚ್ಛಿನ್ನ ಭಕ್ತರಾಗಿ, ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿ, ಪೂಜ್ಯ ಶ್ರೀಗಳವರಲ್ಲಿ ಅನನ್ಯ ಭಕ್ತಿಯನ್ನಿಟ್ಟುಕೊಂಡವರಾಗಿದ್ದರು. ಶ್ರೀಮಠದಲ್ಲಿ ನಡೆಯುವ ಗುರುವಂದನ ಸಮಾರಂಭದಲ್ಲಿ "ವಣಿಕಮಾಣಿಕ್ಯ"ರೆಂದು ಪುರಸ್ಕೃತರಾಗಿದ್ದರು. ಶ್ರೀಯುತರಿಂದ ಸಹಾಯ, ಸಹಕಾರ ಪಡೆದ ಸಂಘ ಸಂಸ್ಥೆಗಳಿಗೆ ಲೆಕ್ಕವಿಲ್ಲ. ತುಮಕೂರಿನ ವೈಶ್ಯ ಬ್ಯಾಂಕು, ಶ್ರೀಮತಿ ಸಾವಿತ್ರಮ್ಮನವರ ಧರ್ಮಶಾಲೆ, ಆರ್ಯವೈಶ್ಯಮಂಡಲಿ. ಕನ್ನಿಕಾಪರಮೇಶ್ವರಿ ದೇವಸ್ಥಾನಗಳು ಶ್ರೀಯುತರ ದೂರದೃಷ್ಟಿಯ ಜೀವಂತ ಸಾಕ್ಷಿಗಳಾಗಿವೆ.

ದಯಾಮಯನಾದ ಪರಶಿವನು ಅಗಲಿದ ಶ್ರೀ ಟಿ. ಅನಂತರಾಮ ಶ್ರೇಷ್ಠಿ ಅವರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆಯಿಂದುಂಟಾದ ದುಃಖವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗದವರಿಗೆ ನೀಡಲೆಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ಸಂತಾಪ ಸೂಚಕ ಸಂದೇಶದಲ್ಲಿ ತಿಳಿಸಿದ್ದಾರೆ.

ದಿವಂಗತರ ಆತ್ಮಕ್ಕೆ ದಯಾಮಯನಾದ ಪರಶಿವನು ಚಿರಶಾಂತಿಯನ್ನೀಯಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.





## ಡಾ. ಚದುರಂಗ



'ಚದುರಂಗ' ಕಾವ್ಯನಾಮದಿಂದ ಕನ್ನಡ ಸಾರಸ್ವತ ಲೋಕದಲ್ಲಿ ಪ್ರಸಿದ್ಧರಾಗಿದ್ದ ಈ ಶತಮಾನದ ಕನ್ನಡದ ಸೃಜನಶೀಲ ಹಿರಿಯ ಲೇಖಕರಾದ ಶ್ರೀ ಎಂ. ಸುಬ್ರಹ್ಮಣ್ಯ ರಾಜೇ ಅರಸ್ ಅವರು ಅಕ್ಟೋಬರ್ ೧೯ರಂದು ನಿಧನರಾದರು. ೧೯೧೬ನೇ ಜನವರಿ ೧ರಂದು ಜನಿಸಿದ ಚದುರಂಗ ಅವರು ಸರಳತೆ, ಸಜ್ಜನಿಕೆ, ಸಹೃದಯತೆಗೆ ಹೆಸರಾಗಿದ್ದರು. ಅವರ ಬರವಣಿಗೆ, ಬೇಸಾಯ ಹಾಗೂ ಚಲನಚಿತ್ರ ಕ್ಷೇತ್ರಗಳಲ್ಲಿ ಹಚ್ಚ ಹಸಿರಾಗಿರುವ ವಿಶಿಷ್ಟ ಕಾಣಿಕೆ ನೀಡಿದ್ದಾರೆ. ಕತೆ, ನಾಟಕ, ಕಾದಂಬರಿ, ಅನುವಾದ ಮೊದಲಾದ ಪ್ರಕಾರಗಳಲ್ಲಿ ೨೫ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ನೀಡಿದ್ದಾರೆ. 'ವೈಶಾಖ', 'ಸರ್ವಮಂಗಳ', 'ಉಯ್ಯಾಲೆ'ಯಂಥ ಶ್ರೇಷ್ಠ ಕಾದಂಬರಿಗಳ ಮೂಲಕ ಓದುಗರ ಹೃದಯ ಸಿಂಹಾಸನದಲ್ಲಿ ಶಾಶ್ವತ ಸ್ಥಾನವನ್ನು ಪಡೆದಿದ್ದಾರೆ. ರಾಷ್ಟ್ರಕವಿ ಕುವೆಂಪು, ಕರ್ನಾಟಕ ನಾಟ್ಯ ವಿಶಾರದೆ ವೆಂಕಟಲಕ್ಷ್ಮಮ್ಮ ಅವರನ್ನು ಕುರಿತು ಮಾಡಿದ ಸಾಕ್ಷ್ಯ ಚಿತ್ರಗಳು ಡಾ. ಚದುರಂಗ ಅವರ ಪ್ರತಿಭೆಯ ದ್ಯೋತಕ. 'ವೈಶಾಖ' ಕಾದಂಬರಿ ಪಂಜಾಬಿ, ತಮಿಳು, ಹಿಂದಿ ಹಾಗೂ ಇಂಗ್ಲೀಷ್ ಭಾಷೆಗಳಿಗೆ ಅನುವಾದಗೊಂಡಿವೆ. ಅವರ ಇತ್ತೀಚಿನ 'ಹೆಜ್ಜಾಲ' ವಿಶಿಷ್ಟ ಕಾದಂಬರಿ.

ಮಂಡ್ಯದಲ್ಲಿ ನಡೆದ ಅಖಿಲ ಭಾರತ ೬೩ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದ ಡಾ. ಚದುರಂಗ ಅವರಿಗೆ ಕರ್ನಾಟಕ ಅಕಾಡೆಮಿ ಸಾಹಿತ್ಯ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ಸರ್ಕಾರದ ರಾಜ್ಯ ಪ್ರಶಸ್ತಿ ಮೊದಲಾದ ಗೌರವಗಳು ಸಂದಿವೆ. ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಪದವಿ ಡಾ. ಚದುರಂಗ ವಿಶಿಷ್ಟ ಪ್ರತಿಭೆಗೆ ಸಂದ ಗೌರವ.

ದಿವಂಗತರ ಅಗಲಿಕೆಗೆ ಪರಮಪೂಜ್ಯ ಶ್ರೀ ಶ್ರೀಗಳವರು ಸಂತಾಪ ಸೂಚಿಸಿದ್ದಾರೆ. ಡಾ. ಚದುರಂಗ ಅವರ ಚೇತನಕ್ಕೆ ಚಿರಶಾಂತಿ ದೊರಕಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

## ಶ್ರೀ ಸತ್ಯಕಾಮ



ಕತೆ, ಕಾದಂಬರಿ, ಕವಿತೆ, ಹರಟೆಗಳ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದ ಶ್ರೀ ಸತ್ಯಕಾಮ (ಅನಂತ ಕೃಷ್ಣ ಶಹಾಪೂರ) ಅವರು ಅಕ್ಟೋಬರ್ ೨೦, ೧೯೯೮ರಂದು ಅಸ್ತಂಗತರಾದರು. ಅವರಿಗೆ ೭೮ ವರ್ಷವಾಗಿತ್ತು. ಬಿಜಾಪುರ ಜಿಲ್ಲೆ ಗಲಗಲಿಯಲ್ಲಿ ೧೯೨೦ರಲ್ಲಿ ಜನಿಸಿದ ಸತ್ಯಕಾಮ ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಅನೇಕ ಸಲ ಸೆರೆಮನೆ ವಾಸವನ್ನು ಅನುಭವಿಸಿದರು. ಅವರು ಕ್ರಿಯಾಶೀಲ ಸಾಹಿತ್ಯ ನಿರ್ಮಾಣದ ಜೊತೆಗೆ ಪತ್ರಿಕೋದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡು "ಶ್ರೀ" ಮತ್ತು "ಕಲ್ಯಾಣ" ಪತ್ರಿಕೆಗಳನ್ನು ಪ್ರಕಟಿಸಿ ಎಲ್ಲರ ಗಮನ ಸೆಳೆದಿದ್ದರು.

'ಉತ್ತರಾಯಣ', 'ಬತ್ತಿದ ಕಡಲು', 'ಆಹುತಿ', 'ರಾಜಕ್ರೀಡೆ', 'ರಾಜಬಲಿ', 'ಬೆಂಕಿಯ ಮಗಳು', 'ತಣ್ಣಗಿನ-ಬೆಂಕಿ' ಕಾದಂಬರಿಗಳನ್ನು ರಚಿಸಿ ಪ್ರಸಿದ್ಧರಾಗಿದ್ದ ಶ್ರೀಯುತರು 'ತಂತ್ರಯೋನಿ', 'ಕಪಿಲವಸ್ತು', 'ಪಂಚಮಗಳ ನಡುವೆ' ಮೊದಲಾದ ಮೌಲಿಕ ಕೃತಿಗಳು ಇವರ ಲೇಖನಿಯಿಂದ ಮೂಡಿ ಬಂದಿವೆ. 'ವೀಣೆ', 'ಮಾತೃ ಮಂದಿರ', 'ಮಾತೃ ಲಹರಿ', ಮತ್ತು 'ಗಂಗಾ ಲಹರಿ' ಇವರ ಕವನ ಸಂಕಲನಗಳು.

ಸಾಹಿತ್ಯ ಕೃಷಿಯ ಜೊತೆಗೆ ತಾನೊಬ್ಬ ಆದರ್ಶ ಪ್ರಗತಿಪರ ರೈತ ಎಂಬುದನ್ನು ಸಾಬೀತುಪಡಿಸಿಕೊಂಡಿದ್ದ ಶ್ರೀ ಸತ್ಯಕಾಮ ಅವರು ಜಮಖಂಡಿ ಸಮೀಪದ ಗುಡ್ಡಗಾಡಿನಲ್ಲಿರುವ ಕಲ್ಲಹಳ್ಳಿಯನ್ನು ನಂದನವನ್ನಾಗಿ ರೂಪಿಸಿದ್ದರು.

ದಯಾಮಯನಾದ ಪರಶಿವನು ಅಗಲಿದ ಹಿರಿಯ ಚೇತನಕ್ಕೆ ಚಿರಶಾಂತಿಯನ್ನು ನೀಡಲೆಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸಂತಾಪ ಸೂಚಿಸಿದ್ದಾರೆ.

ದಿವಂಗತರ ಆತ್ಮಕ್ಕೆ ದಯಾಮಯನಾದ ಪರಶಿವನು ಚಿರಶಾಂತಿಯನ್ನೀಯಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.



# ನೀರು ನಮಗೆ ಏಕೆ ಬೇಕು?

- ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು,
ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು,
ಬೆಂಗಳೂರು-೫೬೦ ೦೦೪

*ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ನೀರು ಒಂದು. ವ್ಯಕ್ತಿಯ ದೈನಂದಿನ ಕೆಲಸ ಕಾರ್ಯಗಳಲ್ಲಿ, ಕೃಷಿ, ವಿದ್ಯುತ್, ಕೈಗಾರಿಕಾ ಕ್ಷೇತ್ರಗಳಲ್ಲಿ ಪ್ರಮುಖಪಾತ್ರವನ್ನು ವಹಿಸುತ್ತಿದೆ. ಜನಸಂಖ್ಯೆ ಹೆಚ್ಚಿದಂತೆ ನೀರಿನ ಅವಶ್ಯಕತೆಯೂ ಹೆಚ್ಚಾಗುತ್ತಿದೆ. ನೀರು ನಮ್ಮ ಆರೋಗ್ಯದ ಜೀವನಾಡಿ ಎಂಬುದನ್ನು ಲೇಖಕರು ಪ್ರಸಕ್ತ ಲೇಖನದಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ.*

ನೀರು ಅತ್ಯಂತ ಅವಶ್ಯಕ ವಸ್ತು. ಪ್ರತಿಯೊಂದು ಜೀವಿಗೂ ಜೀವಿಸಬೇಕಾದರೆ ನೀರು ಬೇಕು. ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿ ಎಲ್ಲವೂ ನೀರಿಲ್ಲದೆ ಬದುಕುವುದಕ್ಕೆ ಸಾಧ್ಯವಿಲ್ಲ. ನೀರಿಲ್ಲದ ಜೀವನ ಊಹಿಸಲು ಅಸಾಧ್ಯ. ಬೆಂಗಳೂರಿನಲ್ಲಿ ಒಂದು ದಿನ ನಲ್ಲಿಯಲ್ಲಿ ನೀರು ಬರಲಿಲ್ಲ ಅಂದರೆ ಆ ದಿನ ಬೆಂಗಳೂರಿನಲ್ಲಿ ಹಾಹಾಕಾರ. ನೀರು ಪೂರೈಕೆ ಕಛೇರಿಗೆ ಫೋನಿನ ಸುರಿಮಳೆ. ನೀರು ನಿಮಗೆ ಯಾತಕ್ಕೆ ಬೇಕು? ಎಂದು ಯಾರನ್ನಾದರೂ ಕೇಳಿದರೆ ಕೂಡಲೇ ಬರುವ ಉತ್ತರ : ಬಾಯಾರಿಕೆ ಅದಕ್ಕೆ ನೀರು ಬೇಕು; ಅಡಿಗೆ ಮಾಡುವುದಕ್ಕೆ ನೀರು ಬೇಕು; ಸ್ನಾನ ಮಾಡುವುದಕ್ಕೆ ನೀರು ಬೇಕು; ಬಟ್ಟೆ ಒಗೆಯುವುದಕ್ಕೆ, ಪಾತ್ರೆ ಬೆಳಗೋದಿಕ್ಕೆ - ಹೀಗೆ ಎಲ್ಲರೂ ಹೇಳುತ್ತಾರೆ. ಇದರ ಜತೆಗೆ ಹಳ್ಳಿಯ ರೈತನನ್ನು ಕೇಳಿದರೆ ಬೆಳೆ ಬೆಳೆಯೋದಿಕ್ಕೆ, ಹಸು ಕರುಗಳಿಗೆ ಕುಡಿಸುವುದಕ್ಕೆ ಸ್ನಾನ ಮಾಡಿಸುವುದಕ್ಕೆ ನೀರು ಬೇಕು. ಪಟ್ಟಣಗಳಲ್ಲಿ ಶುಚಿತ್ವ ಕಾಪಾಡುವುದಕ್ಕೆ, ಕಾರ್ಖಾನೆಗಳಲ್ಲಿ ಯಂತ್ರೋಪಕರಣಗಳನ್ನು ನಡೆಸುವುದಕ್ಕೆ, ಅನೇಕ ರಸಾಯನಿಕ ವಸ್ತುಗಳನ್ನು ತಯಾರಿಸುವುದಕ್ಕೆ ಅಷ್ಟೇ ಅಲ್ಲದೆ, ನಮ್ಮ ದೇಶದಲ್ಲಿ ವಿದ್ಯುಚ್ಛಕ್ತಿ ಉತ್ಪಾದನೆ ಮಾಡುವುದಕ್ಕೂ ಸಹ ನೀರು ಬೇಕು. ಹೀಗೆ ನೀರಿನ ಉಪಯೋಗದ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.



ನೀರು ಪೂರೈಕೆ ಕಡಿಮೆಯಾದ ತಿಂಗಳುಗಳಲ್ಲಿ ಅನೇಕ ರೋಗಗಳು ತಲೆದೋರುತ್ತವೆ. ನೀರು ಪೂರೈಕೆ ಯಥೇಚ್ಛವಾಗಿರುವ ಪ್ರದೇಶಗಳಲ್ಲಿ ಜನರು ಶುಚಿತ್ವ ಹಾಗೂ ಆರೋಗ್ಯದಿಂದ ಇರುತ್ತಾರೆ. ಒಬ್ಬ ಮನುಷ್ಯನಿಗೆ ದೈನಂದಿನ ಅಗತ್ಯಗಳಿಗಾಗಿ ಅತ್ಯಂತ ಕಡಿಮೆ ಎಂದರೆ ೨೫ ಲೀಟರ್‌ಗಳಷ್ಟು ನೀರು ಪೂರೈಕೆ ಆಗಬೇಕು ಎಂದು ಅಂದಾಜು ಮಾಡಲಾಗಿದೆ. ಆದರೆ ನಮ್ಮ ದೇಶದಲ್ಲಿ ಅನೇಕ ಪ್ರದೇಶಗಳಲ್ಲಿ ನೀರಿನ ಅಭಾವ





ಬಹಳ ಜಾಸ್ತಿ. ಮುಂದುವರೆದ ಅನೇಕ ದೇಶಗಳಲ್ಲಿ ನೀರು ಪೂರೈಕೆ ಹೆಚ್ಚಾಗಿದ್ದು ಆರೋಗ್ಯ ಕಾಪಾಡಿಕೊಳ್ಳುವುದಿಕ್ಕೆ ಅನುಕೂಲವಾಗಿರುತ್ತದೆ. ಉದಾಹರಣೆಗೆ : ಅಮೇರಿಕಾದಲ್ಲಿ ಪ್ರತಿ ಮನುಷ್ಯನಿಗೆ ಒಂದು ದಿನಕ್ಕೆ ಸರಾಸರಿ ೫೦೦ ರಿಂದ ೧೦೦೦ ಲೀಟರ್‌ನಷ್ಟು ನೀರು ಪೂರೈಕೆ ಮಾಡಲಾಗುತ್ತಿದೆ. ನೀರು ಪೂರೈಕೆ ಕಡಿಮೆ ಇದ್ದರೆ ಅದು ಕಲುಷಿತವಾಗಿ ಅನೇಕ ರೋಗಗಳು ಹರಡುವುದಕ್ಕೆ ಸಾಧ್ಯವಾಗುತ್ತದೆ. ಉದಾಹರಣೆಗೆ : ಕಾಲರಾ, ಟೈಫಾಯಿಡ್, ಆಮಶಂಕೆ, ಅತಿಬೇಧಿ, ಹಳದಿ ಕಾಮಾಲೆ, ಪೋಲಿಯೋ ರೋಗ, ಅಮೀಬ ಆಮಶಂಕೆ, ಕರುಳಿನ ಹುಳುಗಳು- ಹೀಗೆ ಅನೇಕ ರೋಗಗಳು ನೀರಿನ ಮುಖಾಂತರ ಹರಡುತ್ತದೆ.

**ಜೀವನಾಡಿ**

ನೀರು ನಮ್ಮ ಆರೋಗ್ಯದ ಜೀವನಾಡಿ, ಜೀವಾಧಾರ ಎಂದು ಹೇಳಲು ಅನೇಕ ಆಧಾರಗಳಿವೆ. ಮೊದಲನೆಯದಾಗಿ ಹೇಳಬೇಕೆಂದರೆ ನಮ್ಮ ದೇಹ ಶೇಕಡ ೭೦ರಷ್ಟು ಭಾಗ ನೀರಿನಿಂದ ಮಾಡಲ್ಪಟ್ಟಿದೆ. ನಮ್ಮ ರಕ್ತದಲ್ಲಿ ಶೇ. ೮೩ರಷ್ಟು ಅಂಶವಿದ್ದರೆ, ಮಾಂಸಖಂಡಗಳಲ್ಲಿ ಶೇಕಡ ೭೫ರಷ್ಟು, ಮೂಳೆಗಳಲ್ಲಿ ಶೇಕಡ ೨೨ರಷ್ಟು ನೀರಿನ ಅಂಶವಿರುತ್ತದೆ. ನಮ್ಮ ದೇಹದಲ್ಲಿ ೪೫ ರಿಂದ ೫೦ ಲೀಟರ್‌ನಷ್ಟು ನೀರಿದ್ದು, ಪ್ರತಿದಿನ ಬೆವರು ಮತ್ತು ವಿಸರ್ಜನೆ ಕ್ರಿಯೆಗಳಿಂದ ಎರಡೂವರೆಯಿಂದ ಮೂರು ಲೀಟರ್‌ನಷ್ಟು ನೀರನ್ನು ಹೊರಹಾಕುತ್ತಾ ಇರುತ್ತವೆ.

ನಮ್ಮ ದೇಹಕ್ಕೆ ನೀರು ಬೇಕು ಎಂದು ಸೂಚಿಸುವುದಕ್ಕೆ ಬಾಯಾರಿಕೆ ಒಂದು ಉತ್ತಮ ಲಕ್ಷಣವಾದರೂ ಸಹ, ಎಲ್ಲರೂ ಒಂದೇ ರೀತಿಯಲ್ಲಿ ಬಾಯಾರಿಕೆಯನ್ನು ಸೂಚಿಸುವುದಿಲ್ಲ. ಕೆಲವರು ಬಾಯಾರಿಕೆ ಎಂದು ನೀರು ಕುಡಿದರೆ, ಕೆಲವರು ಬಾಯಾರಿಕೆ ಇದ್ದರೂ ಸಹ ನೀರು ಕುಡಿಯುವುದಿಲ್ಲ. ನಾವು ದಿನನಿತ್ಯ ತೆಗೆದುಕೊಳ್ಳುವ ಆಹಾರ ಜೀರ್ಣ ಆಗಬೇಕಾದರೆ ಹಾಗೂ ಜೀರ್ಣವಾದ ಆಹಾರ ರಕ್ತಗತವಾಗಬೇಕಾದರೆ ನೀರು ಬೇಕು. ಅಷ್ಟೇ ಅಲ್ಲ; ಮಲಮೂತ್ರ ವಿಸರ್ಜನೆ ಸರಿಯಾಗಿ ಆಗಬೇಕಾದರೂ ನೀರು ಅಗತ್ಯವಾಗಿ ಬೇಕು. ನೀರು ಕಡಿಮೆ ಸೇವಿಸುವವರು ಮಲ ಬದ್ಧತೆಯಿಂದ ನರಳುವುದು ಸಾಮಾನ್ಯ.

ನಮ್ಮ ದೇಹದಲ್ಲಿ ರಕ್ತಚಲನೆ ಸರಿಯಾಗಿ ಆಗಬೇಕಾದರೆ, ಶ್ವಾಸಕೋಶಗಳಲ್ಲಿ ರಕ್ತಚಲನೆ ಮತ್ತು ಉಸಿರಾಟದ ಮೂಲಕ ಆಮ್ಲಜನಕ ದೇಹಕ್ಕೆ ದೊರೆಯಬೇಕಾದರೆ, ಜೀವಕಣಗಳು ಸರಿಯಾಗಿ ಕೆಲಸ ಮಾಡಬೇಕಾದರೆ, ರೋಗ ನಿರೋಧಕ ಶಕ್ತಿ ವೃದ್ಧಿಯಾಗಬೇಕಾದರೆ ನೀರು ಬೇಕು. ನಮ್ಮ ದೇಹದ ಕೀಲುಗಳು ಸರಿಯಾಗಿ ಕೆಲಸ ಮಾಡಬೇಕಾದರೆ, ಯಂತ್ರಗಳಲ್ಲಿ ಚಲಿಸುವಾಗ ಸಹಾಯ ಮಾಡುವ, ಗ್ರೀಸ್ ಅಥವಾ ಎಣ್ಣೆ ರೀತಿಯಲ್ಲಿ ನೀರು ಸಹಾಯ ಮಾಡುತ್ತದೆ. ಜೀವಕಣಗಳಲ್ಲಿ ಪೋಷಕಾಂಶ, ಲವಣಗಳು ಚಲಿಸಬೇಕಾದರೆ ನೀರು ಬೇಕು. ಚರ್ಮ ಸುಕ್ಕು ಸುಕ್ಕಾಗದೆ ಸುಂದರವಾಗಿ ಕಾಣಬೇಕಾದರೆ ನೀರು ಅವಶ್ಯಕ. ನಾವೆಲ್ಲರೂ ಹುಟ್ಟುವುದಕ್ಕೆ ಮೊದಲು ತಾಯಿಯ ಗರ್ಭದಲ್ಲಿ ಅಡ್ಡಾಡುತ್ತ ಇದ್ದುದು ಹಾಗೂ ಅಂಗಾಂಗಗಳಿಗೆ ಪೆಟ್ಟಾಗದಂತೆ ರಕ್ಷಿಸಿದ್ದು ತಾಯಿಯ ಗರ್ಭದಲ್ಲಿರುವ ನೀರು ಎಂದರೆ ಆಶ್ಚರ್ಯವಾಗಬಹುದು.

*ಅಶುದ್ಧವಾದ ನೀರಿನ ಸೇವನೆಯಿಂದ ಕಾಲರಾ, ಟೈಫಾಯಿಡ್, ಆಮಶಂಕೆ, ಅತಿಬೇಧಿ, ಹಳದಿ ಕಾಮಾಲೆ, ಪೋಲಿಯೋ ರೋಗ, ಅಮೀಬ ಆಮಶಂಕೆ, ಕರುಳಿನ ಹುಳುಗಳು, ಇತ್ಯಾದಿ ರೋಗಗಳು ಹರಡುತ್ತವೆ. ಶುದ್ಧವಾದ ನೀರಿನ ಸೇವನೆಯಿಂದ ಈ ರೋಗಗಳನ್ನು ತಡೆಗಟ್ಟಬಹುದು.*

**ಎಷ್ಟು ನೀರು ಕುಡಿಯಬೇಕು?**

ನಮ್ಮ ದೇಹದಲ್ಲಿ ನೀರಿನ ಪ್ರಮಾಣ ಸರಿದೂಗಿಸಬೇಕಾದರೆ ಪ್ರತಿದಿನ ೬ ರಿಂದ ೮ ಲೋಟಗಳಷ್ಟು ನೀರು ಕುಡಿಯಬೇಕು. ಹೆಚ್ಚು ಚಟುವಟಿಕೆಯಿಂದ ಕೆಲಸ ಮಾಡುವವರು, ಬಿಸಿಲಿನಲ್ಲಿ ಕೆಲಸ ಮಾಡುವವರು ಹೆಚ್ಚು ನೀರು ಕುಡಿಯಬೇಕು. ಅತಿ ಬೇಧಿಯಿಂದ ಮಕ್ಕಳು ನರಳುತ್ತಿದ್ದರೆ, ದೇಹ ಬತ್ತಿ ಹೋಗದಂತೆ ಮಾಡಲು ಹೆಚ್ಚು ನೀರು ಕುಡಿಸಬೇಕು. ಓ.ಆರ್.ಎಸ್. ಪುಡಿಯನ್ನು ಒಂದು ಲೀಟರ್ ನೀರಿಗೆ ಬೆರೆಸಿ ಗುಟುಕು ಗುಟುಕಾಗಿ ಮಗುವಿಗೆ ಕುಡಿಸುತ್ತಾ ಇರಬೇಕು. ನಮ್ಮ ದೇಹಕ್ಕೆ ಬೇಕಾದ ನೀರಿನ ಅಂಶವನ್ನು ಕಾಫಿ, ಟೀ, ಹಾಲು, ಮಜ್ಜಿಗೆ ಅನೇಕ ದ್ರವರೂಪದ ಆಹಾರ ಅಥವಾ ಪಾನೀಯಗಳಿಂದ ಪಡೆಯುವುದುಂಟು.ನಮ್ಮ ದೇಹಕ್ಕೆ ಬೇಕಾದ ನೀರಿನ ಅಂಶಕ್ಕಾಗಿ ಕೇವಲ ದ್ರವರೂಪದ ಆಹಾರವಷ್ಟೇ ಅಲ್ಲದೆ ಕೆಲವು ಘನರೂಪದ ಆಹಾರದಲ್ಲಿ ಸಹ ನೀರಿನ ಅಂಶ ಹೆಚ್ಚಾಗಿ ಇರುತ್ತದೆ. ಸೌತೆಕಾಯಿ, ಕಲ್ಲಂಗಡಿ, ಕರಬೂಜ ಇವುಗಳಲ್ಲಿ ನೀರಿನ ಅಂಶ ಹೆಚ್ಚು. ಇವುಗಳ ಸೇವನೆ ಆರೋಗ್ಯಕ್ಕೆ ಬಹಳ ಒಳ್ಳೆಯದು. ಊಟ ಮಾಡುವಾಗ ನೀರು ಕುಡಿಯಬಾರದು ಎಂದು ಅನೇಕರು ತಿಳಿಸುವುದುಂಟು. ಊಟ ಮಾಡುವ



ಮೊದಲು, ಊಟ ಮಾಡುವಾಗ, ಊಟದ ನಂತರ ನೀರು ಕುಡಿದರೆ ತಪ್ಪೇನಿಲ್ಲ. ಹೆಚ್ಚು ನೀರು ಕುಡಿದರೆ ಅಜೀರ್ಣ ವಾಗುವುದಿಲ್ಲ. ಹೊಟ್ಟೆ ಉಬ್ಬರಿಸಿಕೊಳ್ಳುವುದಿಲ್ಲ. ಹೆಚ್ಚಾಗಿ ಕುಡಿದ ನೀರು ಮೂತ್ರದ ಮೂಲಕ ವಿಸರ್ಜನೆಯಾಗುತ್ತದೆ.

ಹಲವರು ವಿಪರೀತ ತೂಕ ಅಂದರೆ ಬೊಜ್ಜು ಇರುವವರು, ನಮ್ಮದು ನೀರು ಮೈ ದೇಹದಲ್ಲಿ ನೀರು ತುಂಬಿದೆ ಎನ್ನುತ್ತಾರೆ. ಇದು ಸ್ವಲ್ಪ ಮಟ್ಟಿಗೆ ನಿಜ ಆದರೂ ಹೆಚ್ಚು ನೀರು ಕುಡಿದರೆ ಯಾರೂ ದಪ್ಪ ಆಗುವುದಿಲ್ಲ.

*ನಮ್ಮ ದೇಹದಲ್ಲಿ ರಕ್ತಚಲನೆ ಸರಿಯಾಗಿ ಆಗಬೇಕಾದರೆ ಶ್ವಾಸಕೋಶಗಳಲ್ಲಿ ರಕ್ತಚಲನೆ ಮತ್ತು ಉಸಿರಾಟದ ಮೂಲಕ ಆಮ್ಲಜನಕ ದೇಹಕ್ಕೆ ಸರಿಯಾದ ಪ್ರಮಾಣದಲ್ಲಿ ದೊರೆಯಬೇಕಾದರೆ, ಜೀವಕಣಗಳು ಸರಿಯಾಗಿ ಕೆಲಸ ಮಾಡಬೇಕಾದರೆ, ರೋಗ ನಿರೋಧಕ ಶಕ್ತಿ ವೃದ್ಧಿಯಾಗಬೇಕಾದರೆ ಶುದ್ಧವಾದ ನೀರನ್ನು ಸೇವಿಸಬೇಕು.*

ದೇಹದಲ್ಲಿ ನೀರು ಹೆಚ್ಚು ನಿಲ್ಲುವುದು ಲವಣಾಂಶದಿಂದ. ಕಾಲು, ಮುಖ ಊದಿದವರಿಗೆ, ಅಧಿಕ ರಕ್ತದ ಒತ್ತಡದಿಂದ ಬಳಲುವವರಿಗೆ, ಹೃದಯ ರೋಗಿಗಳಿಗೆ ಉಪ್ಪು ಕಡಿಮೆ ಸೇವಿಸಬೇಕೆಂದು ವೈದ್ಯರು ಸಲಹೆ ಮಾಡುತ್ತಾರೆ. ಇದೇ ರೀತಿ ಮೂತ್ರಪಿಂಡದ ರೋಗಿಗಳು, ಪಿತ್ತಜನಕಾಂಗ ಅಂದರೆ ಲಿವರ್ ವಿಫಲತೆ ಇದ್ದವರಲ್ಲಿ ನೀರು ಹೆಚ್ಚಾಗಿ ಉಳಿದು ಹೊಟ್ಟೆ, ಕೈಕಾಲು ಮುಖ ಊದಿಕೊಳ್ಳುವು ದುಂಟು. ಪ್ರಾರಂಭದ ಹಂತದಲ್ಲಿಯೇ ವೈದ್ಯರ ಸಲಹೆ ಪಡೆಯಬೇಕು. ಬೊಜ್ಜು ಅಥವಾ ಸ್ಥೂಲ ಕಾಯದವರು ಆಹಾರ ಸೇವನೆ ಕಡಿಮೆ ಮಾಡಿ ತೂಕ ಇಳಿಸಿಕೊಳ್ಳುವಾಗ ಹೆಚ್ಚು ನೀರು ಕುಡಿಯುವುದು ಒಳ್ಳೆಯದು. ಇದರಿಂದ ತೂಕ ಕಡಿಮೆಯಾಗುವಾಗ ಕೆಲವು ರಾಸಾಯನಿಕ ವಸ್ತುಗಳ ವಿಸರ್ಜನೆಯಾಗಲು ಸಹಾಯವಾಗುತ್ತದೆ.

**ಉಪ್ಪು ನೀರು ಮಹತ್ವ**

ಗಡಸು ನೀರು ಮತ್ತು ಮೆದು ನೀರು ಇದರ ಬಗ್ಗೆ ಕೆಲವರು ಬಹಳಷ್ಟು ಯೋಚಿಸುತ್ತಾರೆ. ಬಟ್ಟೆ ಒಗೆಯಲು ಗಡಸು ನೀರು ಉಪಯೋಗಿಸಿದರೆ ಸೋಪಿನ ನೊರೆ ಹೆಚ್ಚು ಬರುವುದಿಲ್ಲ. ಹೆಚ್ಚು ಸೋಪು ಬೇಕಾಗುತ್ತದೆ. ನೀರು ಕಾಯಿಸುವ ಪಾತ್ರೆಗಳಲ್ಲಿ ಕರೆ ಕಟ್ಟುತ್ತದೆ. ಆದರೆ ಗಡಸು ನೀರು ಕುಡಿಯುವವರಲ್ಲಿ ಹೃದಯಾಘಾತ ಹಾಗೂ ರಕ್ತದ ಒತ್ತಡ ಕಡಿಮೆ ಪ್ರಮಾಣದಲ್ಲಿ ಕಂಡು ಬಂದಿದೆ. ಪ್ರತಿ ಹನಿ ನೀರೂ ಅಮೂಲ್ಯವಾದುದು. ನಮ್ಮದೇಶದಲ್ಲಿ ಹನಿ ಹನಿ ನೀರಿಗೂ ಕಷ್ಟಪಡುವ ಪ್ರದೇಶಗಳು ಹಲವಾರಿವೆ. ಎಷ್ಟೋ ಹಳ್ಳಿಗಳಲ್ಲಿ ಕುಡಿಯುವ ನೀರಿಗಾಗಿ ಮೈಲಿಗಟ್ಟಲೆ ನಡೆಯಬೇಕು. ಎಷ್ಟೋ ಮಂದಿ ಹೆಂಗಸರಿಗೆ ಮನೆಗೆ ನೀರು ತರುವುದೇ ದಿನದ ಮುಖ್ಯವಾದ ಕೆಲಸ ವಾಗಿರುತ್ತದೆ.

ಪಟ್ಟಣ ಹಾಗೂ ಗ್ರಾಮಗಳಿಗೆ ನೀರು ಪೂರೈಕೆಗಾಗಿ ಸರ್ಕಾರ ಕೋಟಿಗಟ್ಟಲೆ ಹಣ ಖರ್ಚು ಮಾಡುತ್ತಿದೆ. ಬೆಂಗಳೂರಿನಲ್ಲಿ ಮನೆಯಲ್ಲಿ ಬಟ್ಟೆ ಒಗೆಯೋದಿಕ್ಕೆ, ಪಾತ್ರೆ ಬೆಳಗೋದಿಕ್ಕೆ, ಗಿಡಕ್ಕೆ ನೀರು ಹಾಕೋದಿಕ್ಕೆ ಎಲ್ಲಕ್ಕೂ ನಲ್ಲಿಗಳಲ್ಲಿ ಬರುವ ಶುದ್ಧವಾದ ನೀರನ್ನೇ ಬಳಸಲಾಗುತ್ತಿದೆ. ಹೀಗೆ ನೀರು ವೃಥಾ ಪೋಲಾಗುವುದನ್ನು ತಪ್ಪಿಸುವಲ್ಲಿ ಎಲ್ಲರ ಸಹಕಾರ ಬೇಕು.

ಅಧಿಕ ಪ್ರಮಾಣದಲ್ಲಿ ನೀರನ್ನು ಶೇಖರಿಸಿ, ಸ್ಫಟಿಕ ಹಾಕಿ ಶೋಧಿಸಿ, ಕ್ಲೋರಿನ್ ಸೇರಿಸಿ ನಂತರ ನೀರು ಶುದ್ಧವಾಗಿದೆಯೋ ಇಲ್ಲವೋ ಎಂಬುದನ್ನು ವೈಜ್ಞಾನಿಕವಾಗಿ ವಿವಿಧ ರೀತಿಯಲ್ಲಿ ಪರೀಕ್ಷಿಸಿ, ನಂತರ ಪಂಪು ಮಾಡುತ್ತಾರೆ. ಇಷ್ಟೆಲ್ಲ ಪರೀಕ್ಷಿಸಿ ಪಂಪು ಮಾಡಿದ ನೀರನ್ನು ಮನೆಯಲ್ಲಿ ಪೋಲು ಮಾಡಬಾರದು. ಅನಾವಶ್ಯಕವಾಗಿ ನೀರು ಚರಂಡಿಯಲ್ಲಿ ಹರಿದು ಹೋಗುವುದಕ್ಕೆ ಅವಕಾಶ ಕೊಡಬಾರದು. ನೀರು ಅತ್ಯಂತ ಅಮೂಲ್ಯವಾದ ವಸ್ತು, ಜೀವನಾಧಾರ. ಆರೋಗ್ಯಕ್ಕೆ ಜೀವನಾಡಿ ಎಂಬುದನ್ನು ಎಲ್ಲರೂ ಮನಗಾಣಬೇಕು.





## ಸೆಪ್ಟೆಂಬರ್ ೧೩ರಂದು ಮೈಸೂರಿನಲ್ಲಿ ನಡೆದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೦ನೇ ಹುಟ್ಟುಹಬ್ಬದ ಅಭಿನಂದನಾ ಸಮಾರಂಭದ ಸಂಕ್ಷಿಪ್ತ ವರದಿ



ಕೇಂದ್ರ ರಕ್ಷಣಾ ಸಚಿವ ಶ್ರೀ ಜಾರ್ಜ್ ಫರ್ನಾಂಡಿಸ್ ಅವರು ಪರಮ ಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ನಮನ ಸಲ್ಲಿಸುತ್ತಿರುವುದು

"ಪ್ರಪಂಚ ಇಂದು ಸಣ್ಣ ಹಳ್ಳಿಯಾಗಿ ಪರಿವರ್ತನೆಯಾಗಿದೆ. ಇಂಥ ಸಂದರ್ಭದಲ್ಲಿ ನಮ್ಮ ಸಂಸ್ಕೃತಿ, ಸಭ್ಯತೆ ಮುಂತಾದುವುಗಳನ್ನು ಉಳಿಸಿಕೊಳ್ಳುವುದು ನಮ್ಮ ಮುಂದಿರುವ ಅತಿ ದೊಡ್ಡ ಸವಾಲು" ಎಂದು ಕೇಂದ್ರ ರಕ್ಷಣಾ ಸಚಿವ ಜಾರ್ಜ್ ಫರ್ನಾಂಡಿಸ್ ಹೇಳಿದರು.

"ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಬರಹಗಳನ್ನು ಓದುವಾಗ ನನ್ನ ರಾಜಕೀಯ ಗುರುಗಳಾದ ಡಾ. ರಾಮ ಮನೋಹರ ಲೋಹಿಯಾ ಅವರ ನೆನಪಾಗುತ್ತದೆ" ಎಂದು ಹೇಳಿದ ಜಾರ್ಜ್ "ಧರ್ಮ ಎಂಬುದು ದೀರ್ಘಾವಧಿಯ ರಾಜಕಾರಣ. ರಾಜಕಾರಣ ಅಲ್ಪಾವಧಿಯ ಧರ್ಮ ಎಂದು ಲೋಹಿಯಾ ಆಗಾಗ್ಗೆ ಹೇಳುತ್ತಿದ್ದರು" ಎಂದು ನುಡಿದರು.

ಅವರು ಸೆಪ್ಟೆಂಬರ್ ೧೩, ೧೯೯೮ರಂದು ಮೈಸೂರಿನ ಕಲಾಮಂದಿರದಲ್ಲಿ ಶ್ರೀ ಸಿದ್ಧಗಂಗಾ ಮಠದ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ೯೦ನೇ ಹುಟ್ಟುಹಬ್ಬವನ್ನು ಆಚರಿಸಲು



ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಕೃತಿ ಅರ್ಪಣೆ ಮಾಡುತ್ತಿರುವುದು

ಏರ್ಪಡಿಸಿದ ಅಭಿನಂದನಾ ಸಮಾರಂಭವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು.

ಉಪಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಅವರು ಮಾತನಾಡಿ "೧೨ನೇ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ದೀನ-ದಲಿತರ ಉದ್ಧಾರಕ್ಕಾಗಿ ನಡೆದ ಕ್ರಾಂತಿಗೆ ಸರಿಸಮವಾದುದು ಇನ್ನೊಂದಿಲ್ಲ. ಆ ಕಾಲದಲ್ಲೇ ಅವರು ಸ್ತ್ರೀ ಸಮಾನತೆಯನ್ನು ಸಾರಿದರು. ಬಡವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿ ಅವರ ಬದುಕನ್ನು ಉತ್ತಮಪಡಿಸಲು ಶ್ರಮಿಸಿದರು" ಎಂದು ಹೇಳಿದರು. ಅವರು ತಮ್ಮ ಭಾಷಣದಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಎಲ್ಲಾ ಜಾತಿಯ ಬಡಮಕ್ಕಳಿಗೆ ಉಚಿತವಾಗಿ ಊಟ, ವಸತಿ ಮತ್ತು ಶಿಕ್ಷಣವನ್ನು ನೀಡುವುದರ ಮೂಲಕ ಅವರ ಬಾಳಿಗೆ ಹೊಸಬೆಳಕು ನೀಡುತ್ತಿದ್ದಾರೆ ಎಂದರು.

"ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರದು ದಿವ್ಯ ಚೇತನ. ದೇಹವನ್ನು ಜಯಿಸುವುದು ಕಷ್ಟದ ಕೆಲಸ. ಅದನ್ನು ಸಾಧಿಸಿದ ತಪಸ್ವಿ. ನಾನು ಗುಬ್ಬಿ ವೀರಣ್ಣ ನಾಟಕ ಕಂಪನಿಯಲ್ಲಿದ್ದಾಗಿನಿಂದಲೂ ಸ್ವಾಮಿಗಳನ್ನು ಬಲ್ಲೆ. ಅವರು ದಿವ್ಯ ಚೇತನ" ಎಂದು ಅಭಿವಂದನಾ ಭಾಷಣ ಮಾಡಿದ ಚಲನಚಿತ್ರ ನಿರ್ದೇಶಕ ಶ್ರೀ ಜಿ. ವಿ. ಅಯ್ಯರ್ ಶ್ರೀಶ್ರೀಗಳನ್ನು ಬಣ್ಣಿಸಿದರು. ಸಿ.ಐ.ಡಿ ಅಡಿಷನಲ್ ಡಿಜಿಪಿ ಶ್ರೀ ಭಾಸ್ಕರ್ ಅವರು "ಬಸವೇಶ್ವರರ ತತ್ವಗಳನ್ನು ಸಾರಿದ ಸ್ವಾಮೀಜಿಯವರು ೨೧ನೇ ಶತಮಾನದ ಬಸವೇಶ್ವರರು" ಎಂದು ವರ್ಣಿಸಿದರು.








ಉಪಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಕೃತಿ ಸಮರ್ಪಣೆ



ಮಾಜಿ ಸಚಿವ ಶ್ರೀ ಅಜೀಜ್ ಸೇಠ್ ಅವರಿಂದ ಪರಮ ಶ್ರೀ ಶ್ರೀಗಳವರಿಗೆ ಮಾಲಾರ್ಪಣೆ

ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಡಾ. ದೇ. ಜವರೇಗೌಡ ಅವರು ಮಾತನಾಡಿ "ರಾಜಕಾರಣಿಗಳನ್ನು ಅಭಿನವ ಬಸವಣ್ಣ ಎಂದು ಹೊಗಳುವುದು ಸರಿಯಲ್ಲ. ಏಕೆಂದರೆ ಅವರು ಆ ಹೊಗಳಿಕೆಗೆ ಅರ್ಹರಲ್ಲ. ಆದರೆ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಮಾತ್ರ ಅದಕ್ಕೆ ಅರ್ಹರು. ಅವರು ಮಾತ್ರ ಅಭಿನವ ಬಸವಣ್ಣ" ಎಂದು ಶ್ಲಾಘಿಸಿದರು.

ಈ ಸಂದರ್ಭದಲ್ಲಿ ಸ್ವಾಮಿಗಳನ್ನು ಕುರಿತ ಒಂಭತ್ತು ಗ್ರಂಥಗಳನ್ನು ಬಿಡುಗಡೆ ಮಾಡಲಾಯಿತು. ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು, ರಾಜ್ಯಸಭಾ ಸದಸ್ಯ ಎಂ.ರಾಜಶೇಖರಮೂರ್ತಿ, ಲೋಕಸಭಾ ಸದಸ್ಯ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಕೃಷಿ ಮತ್ತು ಮಾರುಕಟ್ಟೆ ಸಚಿವ ಶ್ರೀ ಎಚ್. ನಾಗಪ್ಪ ಸಾಹಿತಿ ಡಾ. ಚದುರಂಗ, ಕಾಂಗ್ರೆಸ್ ಮುಖಂಡ ಅಜೀಜ್ ಸೇಠ್ ಗ್ರಂಥ ಬಿಡುಗಡೆ ಮಾಡಿದರು. ಖ್ಯಾತ ಅಂಕಣಕಾರ ಎಚ್ಚೆಸ್ಕೆ ಸ್ವಾಗತಿಸಿದರು.

## ಕಂಚುಗಲ್ಲು ಬಂಡೇಮಠದಲ್ಲಿ
## ಶ್ರೀ ಸಿದ್ಧಗಂಗಾ ಕೈಗಾರಿಕಾ ತರಬೇತಿಸಂಸ್ಥೆ ಪ್ರಾರಂಭೋತ್ಸವ

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನಿಧ್ಯದಲ್ಲಿ ವೈದ್ಯಕೀಯ ಶಿಕ್ಷಣ ರಾಜ್ಯ ಸಚಿವ ಡಾ. ಎಂ. ಶಂಕರ್ ನಾಯಕ್ ಜ್ಯೋತಿ ಬೆಳಗಿಸುವುದರ ಮೂಲಕ ಜೋಡಣಾ ವಿಭಾಗವನ್ನು ಉದ್ಘಾಟಿಸುತ್ತಿರುವುದು.

"ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳು ಕಳೆದರೂ ದೇಶದಲ್ಲಿ ಅನಕ್ಷರತೆ, ಅಜ್ಞಾನ ನಿರೀಕ್ಷಿಸಿದ ಮಟ್ಟದಲ್ಲಿ ಕಡಿಮೆಯಾಗಿಲ್ಲ, ಗಾಂಧೀಜಿಯವರ ಕಲ್ಪನೆಯ ರಾಮರಾಜ್ಯವನ್ನು ನನಸು ಮಾಡುವ ಜವಾಬ್ದಾರಿ ಪ್ರತಿಯೊಬ್ಬರ ಮೇಲಿದೆ" ಎಂದು ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ತಿಳಿಸಿದರು.

ಅವರು ದಿನಾಂಕ ೧೭-೯-೧೯೯೮ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ಕಂಚುಗಲ್ಲು ಬಂಡೇಮಠದಲ್ಲಿ ಶ್ರೀ ಸಿದ್ಧಗಂಗಾ ಕೈಗಾರಿಕಾ ತರಬೇತಿ ಸಂಸ್ಥೆಯ ಪ್ರಾರಂಭೋತ್ಸವದ ದಿವ್ಯ ಸಾನಿಧ್ಯ ವಹಿಸಿ ಆಶೀರ್ವಚನ ನೀಡಿದರು.

ಕಾರ್ಮಿಕ ರಾಜ್ಯ ಸಚಿವರಾದ ಶ್ರೀ ಬಿ. ಸತ್ಯನಾರಾಯಣ ಅವರು ಎಲೆಕ್ಟ್ರಾನಿಕ್ ಹಾಗೂ ಮೆಕಾನಿಕಲ್ ವಿಭಾಗವನ್ನು ಉದ್ಘಾಟಿಸಿ ಪರಮಪೂಜ್ಯರು ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆಯನ್ನು ಶ್ಲಾಘಿಸಿದರು.

ವೈದ್ಯಕೀಯ ಶಿಕ್ಷಣ ರಾಜ್ಯ ಸಚಿವರಾದ ಡಾ. ಎಂ. ಶಂಕರ್‌ನಾಯಕ್ ಅವರು ಜೋಡಣಾ ವಿಭಾಗವನ್ನು ಉದ್ಘಾಟಿಸಿ ಇಂದಿನ ಯುವ ಜನಾಂಗ ಸರ್ಕಾರಿ ವೃತ್ತಿಯನ್ನು ಅವಲಂಬಿಸದೆ ಸ್ವಯಂ ಉದ್ಯೋಗವನ್ನು ಕೈಗೊಂಡು ಸ್ವಾವಲಂಬಿಗಳಾಗಬೇಕೆಂದು ಕರೆನೀಡಿದರು. ನಾಡಿನ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರಕ್ಕೆ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು





ಮುಖ್ಯ ಅತಿಥಿಗಳಾದ ವೈದ್ಯಕೀಯ ಶಿಕ್ಷಣ ರಾಜ್ಯ ಸಚಿವರಾದ ಡಾ. ಎಂ. ಶಂಕರ್ ನಾಯಕ್, ಕಾರ್ಮಿಕ ರಾಜ್ಯ ಸಚಿವರಾದ ಶ್ರೀ ಬಿ. ಸತ್ಯನಾರಾಯಣ ಅವರಿಗೆ ವಿಭಾಗಗಳ ಪರಿಚಯ ಮಾಡಿಕೊಡುತ್ತಿರುವುದು.

ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಕೊಂಡಾಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಉದ್ಯೋಗ ಮತ್ತು ತರಬೇತಿ ಇಲಾಖೆಯ ಅಪರ ನಿರ್ದೇಶಕ ಶ್ರೀ ಎಸ್. ಎಸ್. ನಾರಾಯಣರಾವ್ ಅವರು ಶ್ರೀ ಸಿದ್ಧಗಂಗಾ ಕ್ಷೇತ್ರ ನಾಡಿನ ಬಡಜನತೆಯ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿರುವ ಬಗ್ಗೆ ಮೆಚ್ಚಿಗೆ ಸೂಚಿಸಿದರು.

ಸಮಾರಂಭದಲ್ಲಿ ಬಂಡೇಮಠದ ಶ್ರೀಗಳಾದ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು, ಗದ್ದುಗೆ ಮಠದ ಶ್ರೀ ಶ್ರೀ ಮಹಾಂತ ಸ್ವಾಮಿಗಳು, ಕಂಬಾಳು ಮಠದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪ್ರೊ. ಬಸವರಾಜಯ್ಯ, ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಹೊನ್ನರಾಯನಹಳ್ಳಿ ಶ್ರೀ ಕೆಂಪಣ್ಣ ಮೊದಲಾದವರು ಉಪಸ್ಥಿತರಿದ್ದರು ಪ್ರಾರಂಭದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ. ಕೆ. ನಂಜುಂಡಪ್ಪನವರು ಸ್ವಾಗತಿಸಿದರು. ವಿದ್ಯಾಧಿಕಾರಿಗಳಾದ ಶ್ರೀ ಸಿ. ಎಸ್. ಸಿದ್ಧಲಿಂಗಯ್ಯನವರು ವಂದನೆ ಸಲ್ಲಿಸಿದರು. ಶ್ರೀ ನರಸಿಂಹಮೂರ್ತಿ ಕಾರ್ಯಕ್ರಮವನ್ನು ನಿರೂಪಿಸಿದರು.

## ವಿಜಯದಶಮಿ ಉತ್ಸವದ ಸಂಕ್ಷಿಪ್ತ ವರದಿ

ದಿನಾಂಕ ೧-೧೦-೯೮ರಂದು ಶ್ರೀ ಮಠದಲ್ಲಿ ಸಕಲ ಸಂಪ್ರದಾಯಗಳೊಂದಿಗೆ ವಿಜಯದಶಮಿಯನ್ನು ಆಚರಿಸಲಾಯಿತು.

ಧಾರ್ಮಿಕ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಧರ್ಮಸಂದೇಶ ನೀಡುತ್ತಾ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳು "ಬಾಂಬು ಅಣುಬಾಂಬುಗಳು ವಿಜೃಂಭಿಸಿ ಜಗತ್ತಿನ ಪ್ರಳಯಕ್ಕೆ ನಾಂದಿ ಹಾಡುತ್ತಿರುವ ಈ ಭೀಕರ ಸ್ಥಿತಿಯಲ್ಲಿ ಭಾರತೀಯರು ಜಗತ್ತಿನ ಕಲ್ಯಾಣಕ್ಕಾಗಿ ಧರ್ಮ-ದೈವಸಾಕ್ಷಾತ್ಕಾರಗಳಿಗಾಗಿ ಪ್ರಜ್ಞೆ ಮಾಡುವ ಶುಭದಿನ ವಿಜಯದಶಮಿ - ಎಂಬುದನ್ನು ಮನಗಾಣಬೇಕು" ಎಂದರು. ದೇಶ ಇಂದು ಏನಾಗಿದೆ? ಎಂದು ಪ್ರಶ್ನಿಸುತ್ತ ಶ್ರೀಗಳವರು "ಮಹಾತ್ಮಗಾಂಧಿ ಇದನ್ನು ಅಪೇಕ್ಷಿಸಿರಲಿಲ್ಲ. ಜನತೆ ನಿಷ್ಕ್ರಿಯರಾಗಿದ್ದಾರೆ. ಶ್ರಮಿಕ ಜೀವನ ಅವರಿಗೆ ಬೇಕಾಗಿಲ್ಲ. ಸುಖ ಜೀವನ ಶೂನ್ಯದಿಂದ ಸೃಷ್ಟಿಯಾಗಲಾರದು. ವ್ಯಕ್ತಿ ತನ್ನಲ್ಲಿರುವ ಶಕ್ತಿಯ ಸದ್ಬಳಕೆ ಮಾಡಿಕೊಳ್ಳಬೇಕು. ರಾಷ್ಟ್ರವನ್ನಿಂದು ಭ್ರಷ್ಟಾಚಾರ ನುಂಗಿ ನೊಣೆಯುತ್ತಿದೆ. ತನ್ನ ಕಬಂಧ ಬಾಹುವನ್ನು ಜೀವನದ ಎಲ್ಲ ರಂಗಗಳಿಗೂ ಚಾಚಿಬಿಟ್ಟಿದೆ. ಜಾತಿ, ಕುಡಿತ, ಲಂಚ, ಕೊಲೆ, ಸುಲಿಗೆ, ಅನೈತಿಕ ವ್ಯವಹಾರಗಳ ರೂಪದಲ್ಲಿ ಕರಾಳ ನೃತ್ಯ ನಡೆಸಿದೆ. ಇದಕ್ಕೆ ಪರಿಹಾರವನ್ನು ಅವರಿವರೆನ್ನದೆ ಎಲ್ಲರೂ ಹುಡುಕುವ ಕಾಲ ಪ್ರಾಪ್ತವಾಗಿದೆ. ಅದಕ್ಕೆ ಸಂಕಲ್ಪ ಇಂದು ನಾವೆಲ್ಲರೂ ಮಾಡೋಣ. ಧರ್ಮದ ಮೇಲೆ ಅಧರ್ಮ, ಶಿಷ್ಟರ ಮೇಲೆ ದುಷ್ಟರ, ನ್ಯಾಯದ ಮೇಲೆ ಅನ್ಯಾಯಗಳ ಆಕ್ರಮಣವಾಗದಂತೆ ಮುನ್ನಡೆಯುವ ಶಕ್ತಿಯನ್ನು ಪರಮಾತ್ಮ ಕರುಣಿಸೆಂದು ಪ್ರಾರ್ಥಿಸೋಣ" ಎಂಬುದಾಗಿ ಶ್ರೀಗಳವರು ನುಡಿದರು.

ಸಮಾರಂಭದಲ್ಲಿ ಶ್ರೀ ಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ನವರಾತ್ರಿಯ ಹಾಗೂ ವಿಜಯದಶಮಿಯ ಹಿನ್ನಲೆ ಮತ್ತು ಮಹತ್ವವನ್ನು ವಿವರಿಸಿದರು. ಶ್ರೀ ಹೆಚ್. ವಿ. ವೀರಭದ್ರಯ್ಯನವರು ಉಪನ್ಯಾಸಮಾಡಿದರು.

ಉತ್ಸವದ ಅಂಗವಾಗಿ ಸಾಂಸ್ಕೃತಿಕ ಮತ್ತು ಯೋಗಾಸನ ಹಾಗೂ ಕೋಲಾಟದ ಪ್ರದರ್ಶನ ನಡೆಯಿತು. ಶ್ರೀ ಕ್ಷೇತ್ರದ ಅಧಿದೇವತೆ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ರಾಜೋಪಚಾರವಾದನಂತರ ಸಾಮೂಹಿಕವಾಗಿ ಬನ್ನಿ -ಬಾಳೆಯನ್ನು ಕಡಿದು ಶಮೀಪತ್ರೆಯನ್ನು ಭಕ್ತಾದಿಗಳು ಪರಮಪೂಜ್ಯ ಶ್ರೀಗಳವರಿಂದ ಪಡೆದು ಮುಡಿದು ಧನ್ಯಭಾವಹೊಂದಿದರು. ಮದ್ದು, ಬಾಣ, ಬಿರುಸಿನ ಪ್ರದರ್ಶನ ನಡೆಯಿತು. ವಿಶೇಷ ಜನಸಮೂಹ ಕಲೆತಿದ್ದರು. ಸಮಾರಂಭದ ಕೊನೆಯಲ್ಲಿ ಶ್ರೀ ಪಿ. ಎನ್. ಚಂದ್ರಶೇಖರ್ ವಂದನೆ ಸಲ್ಲಿಸಿದರು.

## ಮಹಾತ್ಮಾ ಗಾಂಧೀ ಮತ್ತು ಲಾಲ್‌ಬಹಾದ್ದೂರ್ ಶಾಸ್ತ್ರಿ ಜನ್ಮ ಜಯಂತಿ ಆಚರಣೆ



"ಮಹಾತ್ಮ ಗಾಂಧೀಜಿ ಮತ್ತು ಲಾಲ್ ಬಹಾದ್ದೂರ್ ಶಾಸ್ತ್ರಿ ಇವರಿಬ್ಬರೂ ಯುಗಪುರುಷರು. ನಡೆನುಡಿಗಳಲ್ಲಿ ಸಾಮರಸ್ಯವುಳ್ಳವರು. ಇವರಿಬ್ಬರ ವಿಚಾರಗಳಿಂದ ಇಂದು ನಾವು ಬಹಳ ದೂರ ಇದ್ದೇವೆ. ಇವರು ಹೇಳಿದವರಲ್ಲ ಮಾಡಿ ತೋರಿಸಿದವರು" ಎಂದು ಶ್ರೀ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ನುಡಿದರು.

ದಿನಾಂಕ ೨.೧೦.೯೮ರಂದು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಗಾಂಧೀಜಿ ಮತ್ತು ಲಾಲ್ ಬಹಾದ್ದೂರ್ ಶಾಸ್ತ್ರಿ ಅವರ ಜಯಂತಿ ಸಮಾರಂಭದ ದಿವ್ಯ ಸಾನಿಧ್ಯವಹಿಸಿ ಆಶೀರ್ವಚನ ನೀಡುತ್ತಿದ್ದ ಶ್ರೀಗಳು, "ಮಹಾತ್ಮರ ಗುಣವನ್ನು ಸ್ವಲ್ಪವಾದರೂ ತಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ಈ ಜಯಂತಿ ಸಾರ್ಥಕವಾಗುತ್ತದೆ" ಎಂದು ಆಶಿಸಿದರು.

ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯದ ಪ್ರಾಂಶುಪಾಲರಾದ ಡಾ. ಆರ್.ಸಿ. ಪುಟ್ಟಬುದ್ಧಿಯವರು "ಮಹಾತ್ಮರ ಕನಸು ನನಸಾಗಬೇಕಾದರೆ ಸೋಮಾರಿಗಳಾಗದೆ, ಕಾಲಹರಣ ಮಾಡದೆ, ರಾಷ್ಟ್ರಪ್ರೇಮವುಳ್ಳವರಾಗಿ ನಿಸ್ವಾರ್ಥ ಜೀವನ ಸಾಗಿಸಬೇಕು" ಎಂದು ನುಡಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಹೆಚ್.ಎಸ್. ನರಸಿಂಹಜೀಯರ್ ಅವರು "ತತ್ವರಹಿತ ರಾಜಕೀಯ, ದುಡಿಮೆ ಇಲ್ಲದ ಸಂಪತ್ತು, ನೀತಿಹೀನವಾಣಿಜ್ಯ, ಶೀಲವಿಲ್ಲದ ಶಿಕ್ಷಣ, ಆತ್ಮಸಾಕ್ಷಿ ರಹಿತ ಭೋಗ, ಮಾನವೀಯತೆ ಇಲ್ಲದೆ ವಿಜ್ಞಾನ, ತ್ಯಾಗವಿಲ್ಲದ ಸೇವೆ ಇರೆಲ್ಲ ಪಾಪಕಾರ್ಯಗಳು. ಇವು ನಿರ್ಮೂಲವಾಗದ ಹೊರತು ಸಮಾಜದ ಉದ್ಧಾರವಿಲ್ಲ" ಎಂದು ಗಾಂಧೀಜಿಯವರ ಜೀವನ ತತ್ವಗಳನ್ನು ಉದಾಹರಿಸಿದರು.

ಶ್ರೀ ಎಸ್. ಶಿವಕುಮಾರ್ ಸ್ವಾಗತಿಸಿದರು, ಶ್ರೀ ಜಿ. ಹೆಚ್. ಗಂಗಾಧರಯ್ಯ ವಂದನೆ ಸಲ್ಲಿಸಿದರು. ಶ್ರೀ ಎಂ. ಗಣೇಶ ಕಾರ್ಯಕ್ರಮ ನಿರೂಪಿಸಿದರು.





## ಹಳೆಯ ವಿದ್ಯಾರ್ಥಿಗಳ ಸಂಘ, ಶ್ರೀ ಸಿದ್ಧಗಂಗಾಮಠ

### 1998-99ನೇ ಸಾಲಿನ ಹಳೆಯ ವಿದ್ಯಾರ್ಥಿಗಳ ಸಂಘದ ಕಾರ್ಯಕಾರಿ ಸಮಿತಿ

| | | |
|---|---|---|
| ೧. ಅಧ್ಯಕ್ಷರು | : | ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು |
| ೨. ಪ್ರಧಾನ ಕಾರ್ಯದರ್ಶಿ | : | ಡಾ. ಎಂ. ಎನ್. ಚನ್ನಬಸಪ್ಪ |
| ೩. ಸಹ ಕಾರ್ಯದರ್ಶಿಗಳು | : | ಶ್ರೀ ಕೆ. ಸಿ. ಬಸಪ್ಪ, ಶ್ರೀ ಕೆ. ಹೆಚ್. ಶಿವರುದ್ರಯ್ಯ |
| ೪. ವಸ್ತು ಪ್ರದರ್ಶನ ಕಾರ್ಯದರ್ಶಿ | : | ಶ್ರೀ ಬಿ. ಗಂಗಾಧರಯ್ಯ |
| ಜಂಟಿ-ಕಾರ್ಯದರ್ಶಿ | : | ಶ್ರೀ ಕೆ. ವೀರಭದ್ರಯ್ಯ |
| ೫. ಸಿದ್ಧಗಂಗಾ ಮಾಸಪತ್ರಿಕೆ | | |
| ಪ್ರಕಾಶಕರು | : | ಶ್ರೀ ಹೆಚ್.ಬಿ. ಗಂಗಾಧರಯ್ಯ |
| ಪ್ರಧಾನ ಸಂಪಾದಕರು | : | ಶ್ರೀ ಚೆನ್ನಪ್ಪ ಎರೆಸೀಮೆ |
| ಸಂಪಾದಕರು | : | ಶ್ರೀ ಹೆಚ್. ವಿ. ವೀರಭದ್ರಯ್ಯ |
| ಸಹ-ಸಂಪಾದಕರು | : | ಶ್ರೀ ಎಚ್. ಎಸ್. ಸಿದ್ಧಗಂಗಪ್ಪ |
| | : | ಶ್ರೀ ಎಂ. ರೇಣುಕಾರಾಧ್ಯ |
| ೬. ಸದಸ್ಯರು | : | |

| ಅ) ಸರ್ವ ಸದಸ್ಯರ ಸಭೆಯಲ್ಲಿ ಆಯ್ಕೆಯಾದವರು : | ಆ) ಅಧ್ಯಕ್ಷರಿಂದ ನಾಮಕರಣಗೊಂಡ ಸದಸ್ಯರು : |
|---|---|
| ಶ್ರೀ ಹೆಚ್. ಬಿ. ನಂಜುಂಡಯ್ಯ | ಶ್ರೀ ಬಿ. ಎಲ್. ಸಿದ್ಧಯ್ಯ |
| ಶ್ರೀ ಬಿ. ಆರ್. ಪರಮಶಿವಯ್ಯ | ಶ್ರೀ ಸಿ. ಎಸ್. ರಾಮದಾಸ್ |
| ಶ್ರೀ ಆರ್. ಮುದ್ದುರಂಗಯ್ಯ | ಶ್ರೀ ಎನ್. ವೀರಭದ್ರಯ್ಯ |
| ಶ್ರೀ ಶ್ರೀ ಶಿವಲಿಂಗ ಸ್ವಾಮಿಗಳು | ಶ್ರೀ ಬಸವರಾಜಪ್ಪ |
| ಶ್ರೀ ವಿ. ಪಿ. ಗಂಗಣ್ಣ | ಶ್ರೀ ಕೆ.ಎಸ್. ಈಶ್ವರಯ್ಯ |
| ಶ್ರೀ ಸಾಸಲು ನಂಜುಂಡಪ್ಪ | ಶ್ರೀ ಪರಮೇಶ್ವರಪ್ಪ |
| ಶ್ರೀ ಎಸ್. ಶಂಕರಪ್ಪ | ಶ್ರೀ ಎನ್. ಆರ್. ಜಗದೀಶ್ |
| ಶ್ರೀ ವಿ.ಆರ್. ವೀರಭದ್ರಯ್ಯ | ಶ್ರೀ ವಿ. ಶಿವರುದ್ರಯ್ಯ |
| ಶ್ರೀ ಜಿ. ವೀರಪ್ಪ ದೇವರು | |
| ಶ್ರೀ ಸಿ. ಗಂಗಾಧರಯ್ಯ | |

### ವಿಶೇಷ ಆಹ್ವಾನಿತರು

| | |
|---|---|
| ಶ್ರೀ ಎಸ್. ಸಿದ್ಧಗಂಗಯ್ಯ | ಶ್ರೀ ಹೆಚ್. ಎಸ್. ಸಿದ್ಧಲಿಂಗಯ್ಯ |
| ಶ್ರೀ ಪಿ. ಎಸ್. ಪುಟ್ಟಶಂಕರಯ್ಯ | ಶ್ರೀ ಸಿ. ಎಸ್. ಸಿದ್ಧಲಿಂಗಯ್ಯ |
| ಶ್ರೀ ಪಿ. ವಿ. ಹುಚ್ಚವೀರಯ್ಯ | ಶ್ರೀ ಕೆ. ಸಿ. ಶಿವಗಂಗಯ್ಯ |
| ಶ್ರೀ ಎಂ. ಶಿವಣ್ಣ | ಶ್ರೀ ಎಸ್. ವಿಶ್ವನಾಥಯ್ಯ |
| ಶ್ರೀ ಟಿ. ಬಿ. ವಿರೂಪಾಕ್ಷಯ್ಯ | ಶ್ರೀ ಪಿ. ಎನ್. ಚಂದ್ರಶೇಖರಯ್ಯ |
| ಶ್ರೀ ಎಂ. ನಂಜುಂಡಪ್ಪ | ಶ್ರೀ ಬಿ. ಎಸ್. ಬಸವರಾಜು |
| ಶ್ರೀ ಎಂ. ಬಿ. ಶಿವಣ್ಣ | ಶ್ರೀ ಎಸ್. ಶಿವಕುಮಾರ್ |
| ಶ್ರೀ ಬಿ. ವಿರೂಪಾಕ್ಷ | ಶ್ರೀ ಜಿ. ಗವಿಸಿದ್ಧಯ್ಯ |



# ಹಸಿವಿನಿಂದ ಮುಕ್ತಿ

-- ಡಾ. ಹೆಚ್. ಎಂ. ಮರುಳಸಿದ್ಧಯ್ಯ
ನಂ. ೬೨, 'ಈಶಕೃಪ', ಮಂಜುನಾಥ ಕಾಲೋನಿ.
ಜೆ.ಪಿ. ನಗರ, ಬೆಂಗಳೂರು - ೫೬೦ ೦೭೮

ಕವಿ ಬೇಂದ್ರೆಯವರು, 'ಸತ್ತವರ ಲೆಕ್ಕ ಇಡುವವರ ಸೊಕ್ಕ ಯಮ ನೋಡಿ ನಕ್ಕ!' ಎಂದು ಹೇಳುತ್ತಾರೆ. ಆದರೂ ನಾವು ಹುಟ್ಟಿದವರ ಲೆಕ್ಕವನ್ನೂ ಇಡುತ್ತೇವೆ, ಸತ್ತವರ ಲೆಕ್ಕವನ್ನೂ ಇಡುತ್ತೇವೆ.

ಈ ಪ್ರಪಂಚದಲ್ಲಿ ಪ್ರತಿ ನಿಮಿಷವೂ ಹದಿನೆಂಟು ಮಕ್ಕಳು ಹಸಿವಿನಿಂದ ಸಾಯುತ್ತಿದ್ದಾರೆ. ಕಳೆದ ನೂರಾಐವತ್ತು ವರ್ಷಗಳಲ್ಲಿ ನಡೆದ ಯುದ್ಧಗಳಲ್ಲಿ, ದಂಗೆಗಳಲ್ಲಿ ಮತ್ತು ಕೊಲೆ-ಸುಲಿಗೆಗಳಲ್ಲಿ ಸತ್ತವರ ಸಂಖ್ಯೆಗಿಂತ ಕಳೆದ ಆರು ವರ್ಷಗಳಲ್ಲಿ ಹಸಿವಿನಿಂದಲೇ ಹೆಚ್ಚು ಜನ ಸತ್ತಿದ್ದಾರೆ. ಪ್ರತಿಯೊಂದು ನಿಮಿಷದಲ್ಲಿ ಸಾಯುವ ಇಪ್ಪತ್ತನಾಲ್ಕು ಜನರಲ್ಲಿ ಐದು ವರ್ಷದ ಒಳಗಿನ ಹದಿನೆಂಟು ಮಕ್ಕಳು ಸಾಯುತ್ತಾರೆ. ಪ್ರತಿ ವರ್ಷವೂ ಹದಿಮೂರರಿಂದ ಹದಿನೆಂಟು ದಶಲಕ್ಷ ಜನರು ಹಸಿವಿನಿಂದ ಮತ್ತು ಪೌಷ್ಟಿಕಾಂಶದ ಕೊರತೆಯಿಂದ ಸಾಯುತ್ತಿದ್ದಾರೆ.

ಈ ಅಂಕಿ ಅಂಶಗಳನ್ನು ಒದಗಿಸುವವರು ಬೆಂಗಳೂರಿನಲ್ಲಿ ಕಾರ್ಯ ಪ್ರವೃತ್ತವಾಗಿರುವ "ಹಸಿವಿನ ಪರಿಯೋಜನೆ" (Hunger project) ಈ ಸಂಘಟನೆಯವರು. ಪ್ರಪಂಚ ಸಂಸ್ಥೆಯ ಯೂನಿಸೆಫ್ ನಡೆಸಿದ ಸಂಶೋಧನೆಯ ಪ್ರಕಾರ ಮೂರನೆಯ ಜಗತ್ತಿನ ನಗರಗಳಲ್ಲಿ ಇನ್ನು ಸ್ವಲ್ಪ ಸಮಯದಲ್ಲಿಯೇ ಅನೇಕ ಮಕ್ಕಳು ಸಾಯುತ್ತಾರೆ. ಇಲ್ಲವೆ ನಿಕೃಷ್ಟವಾದ ಬಡತನದಲ್ಲಿ ಬಳಲುತ್ತಾರೆ; ತಮ್ಮ ತಮ್ಮ ಮನೆಗಳನ್ನು ತೊರೆದು ಹಿಂಸೆ-ಕ್ರೌರ್ಯ-ಅಮಾನವೀಯ ಪರಿಸರದ ಬೀದಿ ಬೀದಿಗಳಲ್ಲಿ ಜೀವಿಸತೊಡಗುತ್ತಾರೆ.

ಹಸಿವಿನ ಪರಿಯೋಜನೆಯವರು ನೀಡಿದ ಅಂಕಿ-ಅಂಶಗಳು, ಯೂನಿಸೆಫ್‌ನವರು ಚಿತ್ರಿಸಿದ ಭೀಕರ ಭವಿಷ್ಯತ್ತು, ಮಾನವ ಕುಲವು ಸುಖಮಯವಾಗಿ ಜೀವಿಸಲು ಸಾಧ್ಯವಿಲ್ಲವೇನೊ, ಎಂಬ ನಿರ್ಣಯಕ್ಕೆ ಎಡೆಮಾಡುತ್ತಿವೆ.

ಆದರೆ ಹಸಿವಿನ ಪರಿಯೋಜನೆಯುವರು ತುಂಬಾ ಆಶಾವಾದಿಗಳು. ಅವರು ಒದಗಿಸುವ ಚಿತ್ರವು ಚೇತೋಹಾರಿಯಾಗಿದೆ. ಜಗತ್ತಿನಲ್ಲಿ ಲಭ್ಯವಿರುವ ಸಂಪನ್ಮೂಲಗಳು, ಸಂಗ್ರಹವಾಗಿರುವ ಆಹಾರ ಧಾನ್ಯಗಳು ಜಗತ್ತಿನಲ್ಲಿ ಈಗ ಇರುವ ಎಲ್ಲರ ಹಸಿವೆಯನ್ನೂ ಹಿಂಗಿಸಲು ಸಾಕಾಗುತ್ತದೆ. ಅವರು ಮತ್ತೆ ಹೇಳುತ್ತಾರೆ : ೧೯೬೦ ರಿಂದಲೇ ೫೪ ದೇಶಗಳಲ್ಲಿ ಹಸಿವೆಯಿಂದ ಈಗಾಗಲೇ ಜನರು ಮುಕ್ತರಾಗಿದ್ದಾರೆ; ಹಸಿವೆಯೆಂಬುದು ಆ ದೇಶಗಳಿಗೆ ಒಂದು ಮೂಲಭೂತ ಸಮಸ್ಯೆಯಾಗಿ ಉಳಿದೇ ಇಲ್ಲ! ಈ ಪರಿಸ್ಥಿತಿಯು ಆ ದೇಶಗಳಲ್ಲಿ ಸಾಧ್ಯವಾಗಿರುವುದಾದರೆ ಇತರ ದೇಶಗಳಲ್ಲಿ ಇದು ಯಾಕೆ ಸಾಧ್ಯವಾಗಬಾರದು? ಪ್ರಪಂಚದಲ್ಲಿ ಸರಕಾರಗಳು ಸೈನ್ಯಕ್ಕಾಗಿ, ಯುದ್ಧೋಪಕರಣಗಳಿಗಾಗಿ ಖರ್ಚುಮಾಡುವುದಕ್ಕಿಂತಲೂ ಬಹು ಕಡಿಮೆ ವೆಚ್ಚದಲ್ಲಿಯೇ ಈ ಭೂಮಿಯಿಂದ ಹಸಿವೆಯನ್ನು ದೂರಮಾಡಬಹುದು. ನಾವು ಬದುಕಲಿಕ್ಕಾಗಿ ಊಟಮಾಡಬೇಕೇ ಹೊರತು ಊಟಮಾಡಲಿಕ್ಕಾಗಿಯೇ ಬದುಕಕೂಡದು. ಆದರೆ ಕೆಲವರು ಊಟಮಾಡಲಿಕ್ಕಾಗಿಯೇ ಬದುಕುತ್ತಿದ್ದಾರೆ. ಬೇಂದ್ರೆಯವರು ಹೇಳುವ ಹಾಗೆ, "ನಾಳೆ ಬರುವ ಸಾವ ನೆನೆದು ತಿನ್ನುತಿಹರು ಹೆಚ್ಚಿಗೆ!" ದುರಾಸೆಯಿಂದ ಧಾನ್ಯವನ್ನು ಸಂಗ್ರಹಿಸಿ, ಕೃತಕ ಅಭಾವವನ್ನು ಉಂಟುಮಾಡುತ್ತಾರೆ; ನಿರ್ಲಕ್ಷ್ಯೆಯಿಂದ ಇಲಿ-ಹೆಗ್ಗಣಗಳಿಗೆ ಆಹಾರ ಧಾನ್ಯವು ಹಾಳಾಗುತ್ತಿದೆ. ಕೊಳ್ಳಲು ಶಕ್ತಿಯಿಲ್ಲದ ಬಡವರು ಹಸಿದು ಕೊಂಡೇ ಕಾಲತಳ್ಳುತ್ತಿದ್ದಾರೆ, ನರಳಿ ನರಳಿ ಸಾಯುತ್ತಾರೆ; ಸಾಕಲು ಸಾಧ್ಯವಿಲ್ಲದಿದ್ದರೂ ವಿಪರೀತ ಸಂಖ್ಯೆಯಲ್ಲಿ ಮಕ್ಕಳನ್ನು ಪಡೆಯುತ್ತಿದ್ದಾರೆ ಮತ್ತು ಯಮನ ಬಾಯಿಗೆ ಅವರನ್ನು ಬಲಿಕೊಡುತ್ತಿದ್ದಾರೆ; ಹಂಚಿಕೊಂಡು ಉಂಡು ತೃಪ್ತಿಯ ಜೀವನವನ್ನು ನಡೆಸಲು ಜನರು ಮನಸ್ಸು ಮಾಡುತ್ತಲಿಲ್ಲ; ಇರುವ ಸಂಪನ್ಮೂಲಗಳನ್ನು ಸದುಪಯೋಗ ಪಡಿಸಿಕೊಳ್ಳುತ್ತಿರಲಿಲ್ಲ. ಈ ಎಲ್ಲ ಮತ್ತು ಇತರ ಕಾರಣಗಳಿಂದಾಗಿ ಪ್ರಪಂಚದಲ್ಲಿ ಹಸಿವು ಬಹು ಗಂಭೀರವಾದ ಸಮಸ್ಯೆಯಾಗಿ ಕಾಡುತ್ತಲೇ ಇದೆ.

ಆದರೆ, ಹಸಿವಿನ ಪರಿಯೋಜನೆಯನ್ನು ಹುಟ್ಟುಹಾಕಿ, ಜಗತ್ತಿನಾದ್ಯಂತ ಹಸಿವಿನ ಉಚ್ಚಾಟನೆಯ ಆಲೋಚನೆಗೆ, ಸಂವಾದಕ್ಕೆ ಲಕ್ಷ ಲಕ್ಷ ಸಂಖ್ಯೆಯಲ್ಲಿ ಜನರನ್ನು ತೊಡಗಿಸಿರುವ ಕಾರ್ಯಕರ್ತರು ತುಂಬಾ ಆಶಾವಾದಿಗಳು. ಇವರ ಆಶಾವಾದದಲ್ಲಿ ಹುರುಳಿದೆ. ಗಾಂಧಿಯವರು ಹೇಳಿದಂತೆ ನಮ್ಮ ಆವಶ್ಯಕತೆಗಳನ್ನು ಪೂರೈಸಿಕೊಳ್ಳಲು ನಮ್ಮ ಭೂಮಿಯು ಸಾಕಷ್ಟು ಸಾಮರ್ಥವಾಗಿದೆ. ಹಸಿವೆಯನ್ನು ಹಿಂಗಿಸಲಿಕ್ಕಾಗಿಯೇ ಮನುಷ್ಯನ ಹೆಚ್ಚಿನ ಸಾಮರ್ಥ್ಯವೆಲ್ಲಾ ಖರ್ಚಾಗುತ್ತಿರುವುದರಿಂದ ಗುಣಾತ್ಮಕವಾದ, ಸುಸಂಸ್ಕೃತವಾದ ಜೀವನಕ್ಕೆ ಅವಕಾಶವೆಲ್ಲಿದೆ? ಇದನ್ನು ನಾವೆಲ್ಲರೂ ಗಂಭೀರವಾಗಿ ಆಲೋಚಿಸಿದರೆ, ಹಸಿವೆಯನ್ನು ದೂರಮಾಡುವ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಹಮ್ಮಿಕೊಂಡರೆ, ಮಾನವ ಕುಲವು ಬಡತನವಿಲ್ಲದೆ, ಹಸಿವೆಯಿಲ್ಲದೆ, ಹಿಂಸೆ-ಶೋಷಣೆಯಿಲ್ಲದೆ, ಸಾಮರಸ್ಯದಿಂದ ಬಾಳುವ ಸಂಭವವಿದೆ. ಈ ಸಂಭಾವ್ಯತೆಯನ್ನು ಸಾಧ್ಯಗೊಳಿಸುವುದು ನಮ್ಮೆಲ್ಲರ ಆದ್ಯ ಹೊಣೆಯಾಗಿದೆ.





# ಹುಣಸೆ ಮರ

● ಎಚ್.ಎಸ್.ಸಿದ್ಧಗಂಗಪ್ಪ
ನಂ. 53/1, 'ಶಿವಕೃಪ', ಮೊದಲನೆ ಮುಖ್ಯರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ,
ವಿಜಯನಗರ, ಬೆಂಗಳೂರು-40

**'ಹುಣಸೆ ಮರ ಮುಪ್ಪಾದ್ರೂ ಹುಳಿ ಮುಪ್ಪಲ್ಲ' ಹುಣಸೆ ಮರವನ್ನು ಕುರಿತಂತೆ ಒಂದು ಜನಪ್ರಿಯ ಗಾದೆ. ಈ ಮರ ತಾನು ಜೀವಿಸುವವರೆಗೂ ಒಂದೇ ರೀತಿಯ ಒಂದೇ ರುಚಿಯ ಫಲವನ್ನು ಕೊಡುತ್ತದೆ. ಬಹುಪಯೋಗಿಯಾದ ಈ ಹುಣಸೆ ಹಣ್ಣಿಗೂ ಅಡುಗೆಗೂ ಬಿಡಿಸಲಾಗದ ನಂಟು. ಇದನ್ನು 'ಭಾರತದ ಖರ್ಜೂರ' ವೆಂದು ಹೇಳುತ್ತಾರೆ. ನಮ್ಮ ದೇಶದ ಬಹುತೇಕ ಕಡೆಗಳಲ್ಲಿ ಕಂಡು ಬರುವ ಹುಣಸೆ ಮರ, ಉಷ್ಣ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುತ್ತದೆ.**

ಕರ್ನಾಟಕದಲ್ಲಿ ಬಯಲು ಸೀಮೆಯಲ್ಲಿ ಕಂಡು ಬರುವಷ್ಟು ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ ಕಂಡು ಬರುವುದಿಲ್ಲ. ಎಲ್ಲಾ ರೀತಿಯ ಮಣ್ಣಿನಲ್ಲಿಯೂ ಬೆಳೆಯುವ ಈ ಮರ ಮೆಕ್ಕಲು ಮಣ್ಣಿನಲ್ಲಿ ಚೆನ್ನಾಗಿ ಬೆಳೆಯುತ್ತದೆ. ಸದಾ ಹಚ್ಚ ಹಸಿರಿನಿಂದ ಕೂಡಿದ ಈ ಮರ ಬಿಸಿಲಿನ ಬೇಗೆಯನ್ನು ಸಹಿಸಿದಂತೆ, ಮಂಜು, ಇಬ್ಬನಿಯ ಕೊರೆತವನ್ನು ಸಹಿಸುವುದಿಲ್ಲ. ಮೆದುವಾದ ಮಣ್ಣಿನಲ್ಲಿ ಬೇಗ ಬೆಳೆದರೆ, ಗಟ್ಟಿಯಾದ ಮಣ್ಣಿನಲ್ಲಿ ಅದರ ಬೆಳವಣಿಗೆ ನಿಧಾನ.

ಸುಮಾರು ೨.೫ ಮೀಟರುಗಳಷ್ಟು ಎತ್ತರಕ್ಕೆ ಬೆಳೆಯುವ ಸಾಮರ್ಥ್ಯವುಳ್ಳ ಈ ಮರ ದಟ್ಟವಾದ ಬೂದು ಬಣ್ಣದಿಂದ ಕೂಡಿದ್ದು ಒರಟಾದ ತೊಗಟೆಯನ್ನು ಹೊಂದಿದೆ. ಅಲ್ಲದೆ ಹಚ್ಚ ಹಸಿರಿನಿಂದ ಕೂಡಿದ್ದು ವಿಶಾಲವಾಗಿ ಹರಡಿಕೊಂಡಿರುತ್ತದೆ. ಚೈತ್ರ ಮಾಸದಲ್ಲಿ ಚಿಗುರುವ ಈ ಮರದಲ್ಲಿ ಮೇ - ಜೂನ್ ತಿಂಗಳಿನಲ್ಲಿ ಹೂಗಳು ಬಿಡುತ್ತವೆ. ಇವು ನೋಡಲು ಚಿಕ್ಕವಾಗಿದ್ದು ಗುಂಪು ಗುಂಪಾಗಿ ಬಿಡುತ್ತವೆ. ಡಿಸೆಂಬರ್ - ಜನವರಿಯಲ್ಲಿ ಕಾಯಿಗಳು ಬಲಿತು ನಂತರ ಹಣ್ಣಾಗುತ್ತವೆ. ಹಣ್ಣು ಸಿಹಿ ಮಿಶ್ರಿತ ಹುಳಿಯನ್ನು ಹೊಂದಿರುತ್ತದೆ. ಇದರ ಹಣ್ಣು ಸುಮಾರು ೭ ಸೆಂಟಿ ಮೀಟರ್‌ನಿಂದ ೪ ಸೆಂಟಿ ಮೀಟರ್ ಅಗಲ, ೧ ರಿಂದ ೧.೫ ಸೆಂಟಿ ಮೀಟರ್ ದಪ್ಪವಿದ್ದು ಚಪ್ಪಟೆಯಾಗಿರುತ್ತದೆ. ಒಂದು ಕೆ.ಜಿ. ಹಣ್ಣಿನಲ್ಲಿ ಸುಮಾರು ೧,೦೦೦ ದಿಂದ ೧,೩೦೦ ಬೀಜಗಳಿರುತ್ತವೆ. ಈ ಬೀಜಗಳು ಒಂದು ವರ್ಷದವರೆಗೂ ಕೆಡುವುದಿಲ್ಲ. ಅಲ್ಲದೆ ಈ ಬೀಜಗಳ ಮತ್ತೊಂದು ಗುಣ, ಸುಲಭವಾಗಿ ಮೊಳೆಯುವುದಾಗಿದೆ.

### ಸಸಿಗಳ ತಯಾರಿಕೆ

ಹೊಂಗೆ, ಬೇವಿನ ಸಸಿಗಳಂತೆ ಹುಣಸೆ ಸಸಿಗಳು ಸ್ವಾಭಾವಿಕವಾಗಿ ಬೆಳೆಯುವುದು ವಿರಳ. ಒಂದೆಡೆ ಪಾತಿಗಳಲ್ಲಿ ಬೆಳೆಸಿ ನೆಟ್ಟರೆ ಹುಲುಸಾಗಿ ಬೆಳೆಯುತ್ತದೆ. ಬದುವಿನ ಮೇಲೆ ನಿರ್ದಿಷ್ಟ ಅಂತರದಲ್ಲಿ ಗುಣಿಯನ್ನು ಮಾಡಿ ಬೀಜಗಳನ್ನು ನೇರವಾಗಿ ಹಾಕಿ ಸೂಕ್ತ ಹಾರೈಕೆಯಿಂದ ಬೆಳೆಸಬಹುದು. ಪಾತಿಗಳಲ್ಲಿ ಬೆಳೆಸಬೇಕಾದರೆ ಎತ್ತರವಾಗಿ ಮಡಿಗಳನ್ನು ಮಾಡಿ ಸಾಲಿನಲ್ಲಿ ಬೀಜಗಳನ್ನು ನೆಡಬೇಕು. ಬೇರುಗಳು ಉದ್ದವಾಗಿ ಭೂಮಿಯಲ್ಲಿ ಆಳಕ್ಕೆ ಹೋಗುವ ಮುಂಚೆಯೇ ಅವುಗಳನ್ನು ಕಿತ್ತು ನಾಟಿ ಮಾಡುವುದು ಸಸಿಗಳ ಆರೋಗ್ಯಕರ ಬೆಳವಣಿಗೆಯ ದೃಷ್ಟಿಯಿಂದ ಉತ್ತಮ. ಇತ್ತೀಚೆಗೆ ಸಸಿಗಳನ್ನು ಪಾಲಿಥೀನ್ ಚೀಲಗಳಲ್ಲಿ ಹಾಗೂ ಮಣ್ಣಿನ ಕುಂಡಗಳಲ್ಲಿ ಹೆಚ್ಚಾಗಿ ಬೆಳೆಸುತ್ತಾರೆ. ಪಾಲಿಥೀನ್ ಚೀಲದಲ್ಲಿ ಬೆಳೆಸುವಾಗ ತಾಯಿ ಬೇರು ಬೇಗ ಬೆಳೆದು ಚೀಲದಿಂದ ಹೊರಕ್ಕೆ ಬಂದು ಭೂಮಿಯಲ್ಲಿ ಇಳಿಯುವುದರಿಂದ ಸಸಿಗಳನ್ನು ಚೀಲದಿಂದ ಬೇರ್ಪಡಿಸುವಾಗ ಸಸಿಗಳಿಗೆ ಹಾನಿಯಾಗುವ ಸಾಧ್ಯತೆ ಹೆಚ್ಚು.

ಗೊಬ್ಬರ, ಮರಳು ಮತ್ತು ಕೆಂಪು ಮಣ್ಣನ್ನು ೧ : ೧ : ೧ರ ಪ್ರಮಾಣದಲ್ಲಿ ಮಿಶ್ರ ಮಾಡಿ ಪಾಲಿಥೀನ್ ಚೀಲಗಳಲ್ಲಿ ಅಥವಾ ಮಣ್ಣಿನ ಕುಂಡಗಳಲ್ಲಿ ತುಂಬಿ, ಹೆಚ್ಚಾಗಿ ಫಲ ಬಿಡುವ ಮರಗಳಲ್ಲಿ ಹಣ್ಣಿನ ಉತ್ತಮ ಬೀಜಗಳನ್ನು ಆರಿಸಿ ನೆಡಬೇಕು. ಚೀಲಗಳಿಗೆ,

ಕುಂಡಗಳಿಗೆ ಕಾಲ ಕಾಲಕ್ಕೆ ತೇವಾಂಶವನ್ನು ಸಮತೋಲನದಲ್ಲಿ ಕಾಯ್ದುಕೊಳ್ಳಲು ನೀರನ್ನು ಹಾಕುತ್ತಿರಬೇಕು. ಸಾಮಾನ್ಯವಾಗಿ ೧೫ ರಿಂದ ೨೦ ದಿನಗಳಲ್ಲಿ ಬೀಜಗಳು ಮೊಳಕೆಯೊಡೆಯುತ್ತವೆ. ೨ - ೩ ವರ್ಷಗಳು ಪಾಲಿಥೀನ್ ಚೀಲಗಳಲ್ಲಿ ಅಥವಾ ಕುಂಡಗಳಲ್ಲಿ ಬೆಳೆಸಿದ ಸಸಿಗಳನ್ನು ಬಯಲು ಪ್ರದೇಶದಲ್ಲಿ ಸುಮಾರು ೬ರಿಂದ ೮ ಮೀಟರ್ ಅಂತರದಲ್ಲಿ ನೆಡಬೇಕು.

ಸಸಿಗಳನ್ನು ನೆಡುವ ಕೆಲವು ದಿನಗಳ ಮುಂಚೆ ಗುಂಡಿಯನ್ನು ತೆಗೆದು ಮಣ್ಣು ಮಾಗಿದ ನಂತರ ೩ / ೪ ಭಾಗ ಮಣ್ಣನ್ನು ಗುಂಡಿಗೆ ಪುನಃ ತುಂಬಿ ಪಾಲಿಥೀನ್ ಚೀಲಗಳಲ್ಲಿರುವ ಸಸಿಗಳನ್ನು ಬೇರಿಗೆ ಹಾನಿಯಾಗದಂತೆ ಜಾಗರೂಕತೆಯಿಂದ ಸುರಕ್ಷಿತವಾಗಿ ತೆಗೆದು ಬೇರುಗಳಿಗೆ ಅಂಟಿಕೊಂಡಿರುವ ಮಣ್ಣಿನ ಉಂಡೆಯೊಂದಿಗೆ ನೆಡಬೇಕು. ಸಾಮಾನ್ಯವಾಗಿ ಸಸಿಗಳ ಬೆಳವಣಿಗೆ ಮೊದಲೆರಡು ವರ್ಷ ಹೆಚ್ಚಾಗಿರುತ್ತದೆ. ಎರಡು ವರ್ಷಗಳ ಅವಧಿಯಲ್ಲಿ ಸುಮಾರು ೪ ಅಡಿಯವರೆಗೆ ಬೆಳೆಯುತ್ತದೆ. ನಂತರ ನಿಧಾನವಾಗಿ ಬೆಳೆಯುವ ಸಸಿಯನ್ನು ಜಾಗರೂಕತೆಯಿಂದ ಕಾಲಕಾಲಕ್ಕೆ ನೀರು, ಗೊಬ್ಬರ ಹಾಕಿ ಬೆಳೆಸಬೇಕು. ಸಸಿಗಳ ಸುರಕ್ಷತೆಯ ದೃಷ್ಟಿಯಿಂದ ಆದಷ್ಟು ನಾಟಿ ಮಾಡುವ ಸ್ಥಳಕ್ಕೆ ಹತ್ತಿರದಲ್ಲಿ ಬೆಳೆಸಿದರೆ ಅವುಗಳನ್ನು ಸಾಗಿಸಲು ಅನುಕೂಲವಾಗುತ್ತದೆ. ಸಸಿಗಳನ್ನು ಮುಂಗಾರು ಮಳೆ ಬೀಳುವ ಪ್ರದೇಶದಲ್ಲಿ ಮೇ - ಜೂನ್ ತಿಂಗಳಲ್ಲಿ, ಹಿಂಗಾರು ಮಳೆ ಬೀಳುವ ಪ್ರದೇಶದಲ್ಲಿ ಆಗಸ್ಟ್ - ಸೆಪ್ಟೆಂಬರ್ ತಿಂಗಳಿನಲ್ಲಿ ನೆಡಬೇಕು.

**ಸಸಿಗಳ ಸುರಕ್ಷತೆ.**

ಸಸಿಗಳು ಚೆನ್ನಾಗಿ ಬೆಳೆಯಬೇಕಾದರೆ ಕಾಲ ಕಾಲಕ್ಕೆ ಹದವರಿತು ಗೊಬ್ಬರ, ನೀರು ಹಾಕುತ್ತಿರಬೇಕು. ಗುಂಡಿಯಲ್ಲಿರುವ ಮಣ್ಣಿನ ತೇವಾಂಶ ಕಡಿಮೆಯಾಗದಂತೆ ಎಚ್ಚರ ವಹಿಸಬೇಕು. ಅಲ್ಲದೆ ಗುಂಡಿಯಲ್ಲಿ ಹಾಗೂ ಅದರ ಸುತ್ತ ಬೆಳೆಯುವ ಕಳೆಯನ್ನು ಆಗಿಂದಾಗ್ಗೆ ನಾಶಪಡಿಸಬೇಕು. ಬೇಸಿಗೆ ಕಾಲದಲ್ಲಿ ತೇವಾಂಶ ಸುಸ್ಥಿತಿಯಲ್ಲಿಡಲು ವಿಶೇಷ ಗಮನ ಕೊಡಬೇಕು. ಹುಣಸೆ ಸೊಪ್ಪು ತಿನ್ನಲು ರುಚಿಯಾಗಿರುವುದರಿಂದ ಪ್ರಾಣಿಗಳು ಹಾಗೂ ಜಾನುವಾರುಗಳಿಗೆ ಸಿಗದಂತೆ ಮಾಡಲು ರಕ್ಷಣೆಗಾಗಿ ಗಿಡಗಳ ಸುತ್ತಲೂ ಬೇಲಿಯನ್ನು ಹಾಕಬೇಕು.

**ಇಳುವರಿ**

ಉತ್ತಮ ಹಾರೈಕೆಯಿಂದ ಬೆಳೆದ ಮರವು ಸುಮಾರು ೧೫ ವರ್ಷಗಳಲ್ಲಿ ಫಲ ಕೊಡಲು ಪ್ರಾರಂಭಿಸುತ್ತದೆ. ಸಾಮಾನ್ಯವಾಗಿ ಪ್ರತಿ ವರ್ಷ ಒಂದು ಮರದಿಂದ ಸುಮಾರು ೫೦ ರಿಂದ ೧೦೦ ಕೆ.ಜಿ.ಯಷ್ಟು ಹಣ್ಣನ್ನು ಪಡೆಯಬಹುದು. ಇದರಿಂದ ರೈತರಿಗೆ ಒಂದು ಮರದಿಂದ ಸುಮಾರು ೧೫೦೦ ರೂ.ಗಳವರೆಗೂ ಆದಾಯ ಬರುವ ಅಂದಾಜಿದೆ.

**ಉಪಯೋಗ**

ಹುಣಸೆ ಹಣ್ಣನ್ನು ಮಸಾಲೆ ತಯಾರಿಕೆಗೆ, ಸಾಮಾನ್ಯ ಅಡುಗೆ ಹಾಗೂ ಚಟ್ನಿಯನ್ನು ತಯಾರಿಸಲು ಉಪಯೋಗಿಸುತ್ತಾರೆ. ಎಳೆಯ ಎಲೆಗಳನ್ನು ತರಕಾರಿಯಾಗಿ ಬಳಸುತ್ತಾರೆ. ಇದರ ಚಕ್ಕೆ, ಎಲೆ, ಹೂವು, ಹಣ್ಣಿನ ತಿರುಳು, ಬೀಜ ಎಲ್ಲವೂ ಔಷಧಿ ತಯಾರಿಸಲು ಉಪಯೋಗಿಸಲಾಗುತ್ತಿದೆ. ಮಾಗದೆ ಇರುವ ಹಣ್ಣುಗಳಲ್ಲಿ ಹಾಗೂ ಎಲೆಗಳಲ್ಲಿ 'ಟಾರ್ಟರಿಕ್ ಆಮ್ಲ' ಹೆಚ್ಚಾಗಿರುತ್ತದೆ. ಇದನ್ನು ಅನೇಕ ವಿಧದ ಔಷಧಿಗಳ ತಯಾರಿಕೆಯಲ್ಲಿ, ರಾಸಾಯನಿಕ ಶಾಸ್ತ್ರ ಪ್ರಯೋಗ ಶಾಲೆಗಳಲ್ಲಿ, ಆಹಾರ ಪದಾರ್ಥಗಳ ಕೈಗಾರಿಕೆಗಳಲ್ಲಿ ಉಪಯೋಗಿಸುತ್ತಾರೆ. ಇದರ ಬೀಜದ ತಿರುಳನ್ನು ಸಂರಕ್ಷಿಸಿ ಹತ್ತಿ ಬಟ್ಟೆ, ಗೋಣಿ ಹಾಗೂ ಉಲ್ಲನ್‌ಗಳಿಗೆ ಗಂಜಿ ಹಾಕಲು ಬಳಸುತ್ತಾರೆ. ದೀರ್ಘ ಆಯುಷ್ಯವುಳ್ಳ ಈ ಮರ ಸುಮಾರು ೨೦೦ ವರ್ಷಕ್ಕೂ ಹೆಚ್ಚು ಕಾಲ ಬದುಕುತ್ತದೆ. ಈ ಮರದಿಂದ ಕೊಡತಿ, ಒನಕೆ, ಗಾಣ, ಹಿಡಿ, ಗಾಡಿಚಕ್ರ ಮುಂತಾದ ವಸ್ತುಗಳನ್ನು ತಯಾರಿಸ ಬಹುದಾಗಿದೆ. ಅಲ್ಲದೆ ಇದನ್ನು ಮಿಠಾಯಿ, ಜಾಮ್, ಹಾಗೂ ಜೆಲ್ಲಿ ತಯಾರಿಕೆಯಲ್ಲಿ ಹಾಗೂ ಸೌದೆಗಾಗಿಯೂ ಬಳಸಲಾಗುತ್ತಿದೆ.



ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ;
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದ;
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ, ತಂದೆ;
ನಿಮ್ಮ ಶರಣರ ಪಾದವಲ್ಲದೆ
ಅನ್ಯವಿಷಯಕ್ಕೆಳಸದಂತೆ ಇರಿಸು, ಕೂಡಲ ಸಂಗಮದೇವಾ.

**ಗ್ರಾಮೀಣಾಭಿವೃದ್ಧಿ** : ನಿರ್ಮಲ ಗ್ರಾಮ ಯೋಜನೆಯಡಿಯಲ್ಲಿ ಕಳೆದ ೩ ವರ್ಷಗಳಲ್ಲಿ ೩,೬೦,೦೦೦ ಶೌಚಾಲಯಗಳ ನಿರ್ಮಾಣ. ೧೯೯೫-೯೮ರ ಅವಧಿಯಲ್ಲಿ ೪೦೬.೯ ಕೋಟಿ ರೂ. ವೆಚ್ಚದಲ್ಲಿ ಗ್ರಾಮೀಣ ಪ್ರದೇಶದ ಜನರಿಗಾಗಿ ಉದ್ಯೋಗ ಸೃಷ್ಟಿ. **ಆರೋಗ್ಯ** : ೧೯೫೬-೫೭ರಲ್ಲಿ ಆಸ್ಪತ್ರೆಗಳ ಸಂಖ್ಯೆ ೯೭. ೧೯೯೬-೯೭ರಲ್ಲಿ ಆಸ್ಪತ್ರೆಗಳ ಸಂಖ್ಯೆ ೨೯೪ ಮತ್ತು ೧೯೭೮೧ ಚಿಕಿತ್ಸಾಲಯಗಳು. ರಾಯಚೂರಿನಲ್ಲಿ ೨೯.೨೫ ಕೋಟಿ ರೂ.ಗಳ ವೆಚ್ಚದಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯೊಂದನ್ನು ರೂಪಿಸಲಾಗುತ್ತಿದೆ. ೩ವರ್ಷಗಳಲ್ಲಿ ೨೩೨ ಸಮುದಾಯ ಆರೋಗ್ಯ ಕೇಂದ್ರಗಳ ಪ್ರಾರಂಭ. ಆವಾಸ್ ಯೋಜನೆ, ಗೃಹ ಮಂಡಳಿ, ಅಂಬೇಡ್ಕರ್ ಯೋಜನೆ, ಕೊಳಚೆಪ್ರದೇಶ ನಿರ್ಮೂಲನಾ ಯೋಜನೆ ಮತ್ತು ಆಶ್ರಯ ಯೋಜನೆಯಡಿಯಲ್ಲಿ ಒಟ್ಟು ೩.೫ ಲಕ್ಷ ಮನೆಗಳನ್ನು ಕಟ್ಟಲಾಗಿದೆ. ೧೯೯೮-೯೯ರ ಅಂತ್ಯದವರೆಗೆ ಒಟ್ಟಾರೆ ೫ ಲಕ್ಷ ಮನೆಗಳ ಪೂರ್ಣಗೊಳಿಸುವ ಗುರಿ. **ಶಿಕ್ಷಣ** : ೧೯೬೦ರಲ್ಲಿ ರಾಜ್ಯದ ಸಾಕ್ಷರತಾ ಪ್ರಮಾಣ ಶೇ. ೨೦. ಈಗ ಶೇ. ೫೬ ತಲುಪಿದೆ. ಹೊಸದಾಗಿ ೧೪೮೯ ಪ್ರಾಥಮಿಕ ಶಾಲೆಗಳ ಪ್ರಾರಂಭ. ೩೦೨೪ ಕಿರಿಯ ಪ್ರಾಥಮಿಕ ಶಾಲೆಗಳನ್ನು ಹಿರಿಯ ಪ್ರಾಥಮಿಕ ಶಾಲೆಗಳಾಗಿ ಮಾರ್ಪಾಡು. ಕಳೆದ ೩ ವರ್ಷಗಳ ಅವಧಿಯಲ್ಲಿ ೫೫,೮೨೫ ಪ್ರಾಥಮಿಕ, ೫೪೨೧ ಪ್ರೌಢಶಾಲಾ ಶಿಕ್ಷಕರ ನೇಮಕ. ೨೦೪ ಖಾಸಗೀ ಸಂಸ್ಥೆಗಳು ಪ್ರೌಢಶಾಲೆಗಳನ್ನು ತೆರೆಯಲು ಅನುಮತಿ. **ವಿದ್ಯುತ್** : ೧೯೯೪-೯೫ರಲ್ಲಿ ೧೬,೩೧೫ ದಶಲಕ್ಷ ಯೂನಿಟ್‌ಗಳ ವಿದ್ಯುತ್ ಉತ್ಪಾದನೆಯ ಹಾಗೂ ೧೯೯೬-೯೭ರ ಅವಧಿಯಲ್ಲಿ ೧೬೫೧೯ ದಶಲಕ್ಷ ಯೂನಿಟ್‌ಗಳ ವಿದ್ಯುತ್ ಉತ್ಪಾದನೆ. ಕದ್ರಾ ಮತ್ತು ಕೊಸಳ್ಳಿ ಜಲ ವಿದ್ಯುತ್ ಯೋಜನೆಗಳ ಮೊದಲ ಘಟ್ಟ ಪೂರ್ಣಗೊಂಡು ತಲಾ ೫೦ ಮೆ. ವ್ಯಾ. ವಿದ್ಯುತ್ ಉತ್ಪಾದನೆ ಪ್ರಾರಂಭ. **ಕೈಗಾರಿಕೆ** : ಪ್ರಸ್ತುತ ಸರ್ಕಾರದ ಅವಧಿಯಲ್ಲಿ ಅನೇಕ ಬಹುರಾಷ್ಟ್ರೀಯ ಕಂಪನಿಗಳು (ಟೋಯೋಟಾ, ವೋಲ್ವೋ ಇತ್ಯಾದಿ) ಸ್ಥಾಪನೆ ಹಾಗೂ ದೇಶೀಯ ಟೆಲ್ಕೋ ಕಂಪನಿಯ ಪ್ರಾರಂಭ ಮತ್ತು ಅನೇಕಲ್ ಬಳಿ ೫೨೫ ಕೋಟಿ ರೂ.ಗಳ ಬಂಡವಾಳದ ಭಾರೀ ವಾಣಿಜ್ಯ ವಾಹನ ತಯಾರಿಕೆ ಘಟಕ ವೋಲ್ವೋ ಸ್ಥಾಪನೆ.

ಇಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್ ಕೈಗಾರಿಕೆಗಳ ಬೆಳವಣಿಗೆಗೆ ರಾಜ್ಯ ಸರ್ಕಾರದ ಆದ್ಯತೆ. ಮಾಹಿತಿ ತಂತ್ರಜ್ಞಾನ ಪಾರ್ಕನ ಆರಂಭ. ೨೦೦೦ ಕೋಟಿ ರೂ.ಗಳ ವಾರ್ಷಿಕ ವಹಿವಾಟು. ೩೨೦೦ ಕೋಟಿ ರೂ. ಬಂಡವಾಳದ ಜಂಟಿ ವಲಯದ ಜಿಂದಾಲ್ ವಿಜಯನಗರ ಉಕ್ಕು ಕಾರ್ಖಾನೆ, ಬಳ್ಳಾರಿ ಜಿಲ್ಲೆಯಲ್ಲಿ ಮೂಲ ಸೌಕರ್ಯ ಅಭಿವೃದ್ಧಿ ಸಂಸ್ಥೆ : ಸರಕಾರ ಮೊಟ್ಟಮೊದಲ ಬಾರಿಗೆ ಮೂಲ ಸೌಕರ್ಯಗಳ ಅಭಿವೃದ್ಧಿಗಾಗಿ ಪ್ರತ್ಯೇಕ ಇಲಾಖೆಯೊಂದನ್ನು ಸ್ಥಾಪಿಸಿದೆ. ೧೯೯೨-೯೩ರವರೆಗೆ ರಾಜ್ಯದಲ್ಲಿ ೧,೩೪,೫೪೨ ಕಿ. ಮೀ. ಉದ್ದದ ರಸ್ತೆ ಜಾಲವಿದ್ದರೆ ೧೯೯೭-೯೮ರಲ್ಲಿ ೧,೩೯,೨೧೦ ಕಿ.ಮೀಗೆ ವಿಸ್ತರಣೆ. **ಸಿ ಬರ್ಡ್ ಪ್ರಾಜೆಕ್ಟ್** : ೧೯೮೬ರಷ್ಟು ಪೂರ್ವದಲ್ಲಿಯೇ ಪ್ರಾರಂಭಿಸಿ ಕಳೆದ ೧೨ ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಕಾರವಾರ ಸೀ ಬರ್ಡ್ ಯೋಜನೆಗೆ ಮರುಜೀವ. ಇದು ರಾಜ್ಯದ ಹಣಕಾಸು ವ್ಯವಸ್ಥೆಯಲ್ಲಿನ ಹೆಚ್ಚಳಕ್ಕೆ ಸಹಾಯಕ. ಮಾನ್ಯ ಮುಖ್ಯಮಂತ್ರಿಯವರ ಕ್ರಿಯಾಶೀಲತೆಗೆ ಸಂದ ಜಯ. **ಸಾರಿಗೆ ಮತ್ತು ಸಂಪರ್ಕ**: ಸಾರಿಗೆ ಸಂಸ್ಥೆಯನ್ನು ಮೂರು ಸ್ವಾಯುತ್ತ ವಿಭಾಗಗಳನ್ನಾಗಿ ವಿಂಗಡಣೆ ಮತ್ತು ಹೊಸದಾಗಿ ೪೦೦೦ ಬಸ್ಸುಗಳ ಖರೀದಿ. ರಾಜ್ಯದಲ್ಲಿ ಗ್ರಾಮೀಣ ಜನರ ಸರ್ವತೋಮುಖ ಅಭಿವೃದ್ಧಿಗಾಗಿ ಸರ್ಕಾರ ದೇಶದಲ್ಲೇ ಮೊಟ್ಟಮೊದಲ ಬಾರಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೊಳಿಸಿ ಅಧಿಕಾರ ವಿಕೇಂದ್ರಿಕರಣ. ಆಡಳಿತವನ್ನು ಜನರಿಗೆ ಮತ್ತಷ್ಟು ಸಮೀಪಕ್ಕೊಯ್ಯಲು ೭ ಹೊಸ ಜಿಲ್ಲೆಗಳ ಆರಂಭ. ರಾಜ್ಯದ ತೀರ ಹಿಂದುಳಿದ ಗ್ರಾಮಗಳನ್ನು ಮಾದರಿ ಗ್ರಾಮಗಳಾಗಿ ಅಭಿವೃದ್ಧಿಪಡಿಸಲು ಸ್ವಸ್ತಿ ಗ್ರಾಮ ಯೋಜನೆ. ಮುಂದಿನ ಎರಡು ವರ್ಷಗಳಲ್ಲಿ ರಾಜ್ಯದ ಎಲ್ಲಾ ಹಳ್ಳಿಗಳಿಗೆ ೯೦೦ ಕೋಟಿ. ರೂ. ವೆಚ್ಚದಲ್ಲಿ ಕುಡಿಯುವ ನೀರು ಪೂರೈಕೆ. ಆದ್ಯ ವಲಯಗಳಿಗೆ ಒತ್ತು ಕೊಟ್ಟು ಗ್ರಾಮೀಣ ನೀರು ಸರಬರಾಜು, ವಸತಿ, ಶಿಕ್ಷಣ, ಆರೋಗ್ಯ, ರಸ್ತೆ ಇತ್ಯಾದಿ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವತ್ತ ಸರ್ಕಾರದ ದೃಢ ಸಂಕಲ್ಪ, ಜನತೆ ಸಾಮಾಜಿಕ, ಆರ್ಥಿಕ ರಂಗಗಳಲ್ಲಿ ಪ್ರಗತಿಯ ಫಲ ಸವಿಯುವಂತಾದಾಗಲೇ ನಮ್ಮ ಸ್ವಾತಂತ್ರ್ಯೋತ್ಸವ ಅರ್ಥಪೂರ್ಣ.

ಸುಂದರ ಕನಸಿನ ಪ್ರೇರಣೆ. ಮಹತ್ತರ ಸಾಧನಗೆ ಸಮರ್ಪಣೆ.

ಕರ್ನಾಟಕ ವಾರ್ತೆ

*Printed at : Geetanjali Printers, Bangalore-54*

